# ಪಂಚಮ

ಸಂಪುಟ-11
ಸಂಚಿಕೆ-18
ಸೆಪ್ಟೆಂಬರ್ 16-30
ಬೆಲೆ : 1 ರೂ

ಸೆಪ್ಟೆಂಬರ್ 16-30, 1987


## ಧರ್ಮವೇ ಆಗ ನಿನ್ನ ಬಾಯಲ್ಲಿ ಏನಿತ್ತು?

ಬೆಂಡಿಗೇರಿ ಬೆಳಗಾಂತಾ ಲೂಕಿನ ಒಂದು ಹಳ್ಳಿ. ಎಲ್ಲ ಹಳ್ಳಿಗಳಂತೆಯೇ ಇಲ್ಲಿಯೂ ದಲಿತರು ಅಲ್ಪಸಂಖ್ಯಾತರು. ಪ್ರಬಲ ಜಾತಿಗಳ ನಿರಂತರ ತುಳಿತದಡಿ ನುಜ್ಜುಗುಜ್ಜಾದವರು. ಈ ತುಳಿತಕ್ಕೆ ಇನ್ನಷ್ಟು ಕಸುವು ತುಂಬುವ ಜನತಾ ಸರ್ಕಾರದ ವಿಕೇಂದ್ರಿಕರಣದ ವಿಕೃತ ಕೂಸು ದಲಿತರ ಪಾಲಿನ ಮರಣಮಾರಿಯಾಗಿ ಪರಿಣಮಿಸಿದೆ. ಊರೂರುಗಳಿಗೆ ಪ್ಲೇಗ್‌ನಂತೆ ದಾಳಿ ಇಟ್ಟಿರುವ ಮಂಡಲ್ ಮಾರಿ ಬೆಂಡಿಗೇರಿಗೂ ಬಂತು. ದಲಿತರು ತಮಗೆ ಇಷ್ಟ ಬಂದ ಅಭ್ಯರ್ಥಿಗೆ ಮತ ನೀಡಿದರು. ಇದೇ ಅವರು ಮಾಡಿದ ಘನ ಘೋರ ಅಪರಾಧ. ದಲಿತರ ಮೈ, ಮನಸ್ಸೂ ತಮ್ಮ ಗುತ್ತಿಗೆ ಎಂದು ಭಾವಿಸಿರುವ ಪ್ರಬಲ ಕೋಮಿನ ಒಂದು ಗುಂಪಿಗೆ ಕೋಡು ಮುರಿದಂತಾಯಿತು. ಈ ಗುಂಪು ದಲಿತರ 'ಸೊಕ್ಕು' ಮುರಿದು 'ಪಾಠ ಕಲಿಸಲು' ತೀರ್ಮಾನಿಸಿತು.

ಈ ಪಾಠ ಕಲಿಸುವ ಮೊದಲ ಪೀಠಿಕೆಯೇ 3-8-87 ರ ಸೋಮವಾರದಂದು ನಡೆದ ನಾಡಿಗೆ ನಾಡೇ ನಾಚಿ ತಲೆ ತಗ್ಗಿಸಬೇಕಾದ ಘಟನೆ.

ಅಂದು ಎಂದಿನಂತೆ ದಲಿತರು ತಮ್ಮ ಕಾಳು, ಕಡ್ಡಿ ಕಾಯಕದಲ್ಲಿ ತೊಡಗಿದ್ದರು. ಜಾತಿ ಅಹಂಕಾರದಿಂದ ಕುದಿಯತೊಡಗಿದ್ದ ಈ ಲಿಂಗವಂತ ಗೂಂಡಾಗುಂಪು ದಲಿತ ಕಲ್ಲಪ್ಪ ದ್ಯಾಮಪ್ಪ ತಳವಾರ, ಸುಬಾಷ್ ಕಲ್ಲಪ್ಪ ಕೋಳಕರ, ಸಾವಂತ ಸಿದ್ದಪ್ಪ ಗೋಳಕರ, ಎಲ್ಲಪ್ಪ ದೇಂಡಪ್ಪ ಕೋಳಕರ ಮತ್ತು ಮಡಿವಾಳಿ ಮುದುಕಪ್ಪ ಹೈಬತ್ತಿ ಅವರನ್ನು ತಮ್ಮ ಜಮೀನಿನಲ್ಲಿ ಮೇವು ಕಳುವು ಮಾಡಿದರೆಂಬ ಆರೋಪ ಹೊರಿಸಿ ಹುಚ್ಚು ನಾಯಿಗಳಂತೆ ಬೀದಿಯಲ್ಲಿ ದರದರನೆ ಎಳೆದೊಯ್ದರು. ಹೋಗಿ ದೆವ್ವದಂಥ ತಮ್ಮ 'ವಾಡ'ದಲ್ಲಿ ಕೂಡಿ ಹಾಕಿದರು.

ಹಾಡು ಹಗಲೇ ಹೀಗೆ ಎಳೆದೊಯ್ಯುವಾಗ ಗ್ರಾಮದ 400-500 ಜನರ ಗುಂಪು ಮೌನವಾಗಿ ನೋಡುತ್ತಿತ್ತು.

ದಲಿತರನ್ನು ಎಳೆದೊಯ್ದು ಆವರಣದೊಳಗೆ ಕೂಡು ಹಾಕಿ ಬಿಡಿಸಲು ಇನ್ನುಳಿದ ದಲಿತರು ಯಾರೂ ಬಾರದಿರುವಂತೆ ಗೇಟು ಮುಚ್ಚಿಕೊಂಡರು. ಹೀಗೆ ಮುಚ್ಚಿದ ಕೂಡಲೆ ಅವರ ಹೃದಯದ ಬಾಗಿಲುಗಳು ತೆರೆದುಕೊಂಡವು. ಆ ತೆರೆದ ಬಾಗಿಲುಗಳಿಂದ ಸಾವಿರಾರು ವರ್ಷಗಳಿಂದ ತಳವೂರಿದ್ದ ಸೈತಾನರು ಹೊರಬಂದರು.

ಆ ನಂತರದ್ದು ಮನುಷ್ಯರು ಅಂದುಕೊಳ್ಳುವವರೆಲ್ಲಾ ತಾವು ಮನುಷ್ಯರೆನ್ನಿಸಿಕೊಂಡ ಏಕಮಾತ್ರ ಕಾರಣಕ್ಕಾಗಿಯೇ ನಾಚಿ, ಹೇಸಿ, ನರಳಬೇಕಾದ ಕೃತ್ಯ. ಈ ಸೈತಾನಿ ಗುಂಪಿನ ಗುರು ಪಾದಪ್ಪ ಗಂಗಪ್ಪ ಮೇಳದ ಎಂಬಾತನು ಈ ದಲಿತರಲ್ಲೊಬ್ಬಾತನನ್ನು ಕರೆದುಕೊಂಡು ಹೊರ ಹೋಗಿ ತಾನು ಮುಟ್ಟಲೂ ಹೇಸಿದ ಮಲವನ್ನು ಆತನ ಕೈಯಲ್ಲೇ ಹೊರಸಿ ತಂದನು. ಎಲ್ಲರೂ ತಿನ್ನುವಂತೆ ಒತ್ತಾಯಿಸಲಾಯಿತು. ತಿನ್ನಲೊಲ್ಲದ ದಲಿತರನ್ನು ಹೊಡೆದ ಬಡಿದು ಬಲಾತ್ಕಾರವಾಗಿ ಮಲ ತಿನ್ನಸಲಾಯಿತು. ಹೀಗೆ ತಿನ್ನಿಸಿದ ಪರಾಕ್ರಮಕ್ಕೆ ಸಂತೋಷಪಟ್ಟ ಈ ಗುಂಪು ಕುಣಿದು ಕೇಕೆ ಹಾಕಿತು. ಪೋಲಿಸು ಗಿಲೀಸು ಅಂತ ದೂರು ಒಯ್ದರೆ ಸುಟ್ಟು ಬಿಡುವುದಾಗಿ ಬೆದರಿಸಿ ಹೊರದಬ್ಬಿತು.

(4ನೇ ಪುಟಕ್ಕೆ)



ಬೆಂಡಿಗೇರಿಗೆ ಬೆಳಗಾವಿಯಿಂದ ಹೊರಟ ಸಾವಿರ ಸೈಕಲ್ಲುಗಳ ದ.ಸಂ.ಸ. ಜಾಥಾ

# ಬುದ್ಧನ ನಾಡಲ್ಲಿ ನಾಕು ಹೆಜ್ಜೆ........

ಇತ್ತೀಚೆಗೆ ಕಾಶಿಯಲ್ಲಿ ದಲಿತ, ರೈತ ಮತ್ತು ಆದಿವಾಸಿಗಳ ನಡುವೆ ಕೆಲಸ ಮಾಡುತ್ತಿರುವ ಸಮಾನ ಮನಸ್ಕ ಸಂಘಟನೆಗಳ ಒಂದು ಸಭೆ ನಡೆಯಿತು. ಸಭೆಗೆ ನಾನು ಮತ್ತು ಚಿಂತಾಮಣಿಯ ಗೆಳೆಯ ನಾ. ಶಿವಣ್ಣ ಹೋಗಿ ಬಂದೆವು. ನಾವು ಅಲ್ಲಿ ಕಂಡ ತುಣುಕು ಚಿತ್ರಗಳಿವು.

ಎನ್. ವೆಂಕಟೇಶ್

ಅಲ್ಲಿ ಚರ್ಚಿಸಲಾದ ಸರ್ವಮಾನ್ಯ ಅಂಶಗಳನ್ನು ಆಧರಿಸಿದ ಲೇಖನ 12 ನೇ ಪುಟದಲ್ಲಿದೆ.

–ಸಂ.

---

ರಿಂದಲೂ ಮನಸಿನಲ್ಲಿ ಅಪಾರ ಭಕ್ತಿ ಬೆಳೆಸಿದ ಪವಿತ್ರ ನಗರ ಕಾಶಿ (ವಾರಣಾಸಿ) ರಸ್ತೆಯಲ್ಲಿ ನಾವು ನಡೆಯುತ್ತಿದ್ದಾಗ ಭಯಾನಕ ಸಂಗತಿಗಳನ್ನು ಕಾಣತೊಡಗಿದ್ದೆವು. ಬೆಳಗಿನ ಏಳು ಗಂಟೆಯೂ ಆಗಿಲ್ಲ. ನಾಲ್ಕು ಜನ ಹೊತ್ತು ಒಯ್ಯುತ್ತಿದ್ದ ಹೆಣ ಆಗಲೇ ಗಂಗಾನದಿ ಮಡಿಲು ಸೇರಿತ್ತು. ಈ ನಗರದ ಸುತ್ತಲು ಹರಿಯುತ್ತಿರುವ ಗಂಗೆಗೇ ತನ್ನೊಳಗೆ ಬಂದು ಬೀಳುವ ಹೆಣಗಳ ಲೆಕ್ಕವಿಲ್ಲ. ಭಾರಿ ಪವಿತ್ರಳೆಂದು ಮೆರೆದ ಗಂಗೆ ಈವರೆಗೆ ನಡೆದ ನಾನಾ ಹಾದರಗಳಿಗೆ ಮೂಕ ಸಾಕ್ಷಿಯಾಗಿ ಹರಿಯುತ್ತಿದ್ದಾಳೆ. ಆಕೆಯ ತೀವ್ರ ಮೌನದ ನಡುವೆ ಕೇಳಿ ಬರುವ ಜುಳು ಜುಳು ನಿನಾದ ಮೂಲಕ ಆಕೆ ಏನು ಹೇಳಬೇಕೆಂದು ಬಯಸಿದ್ದಾಳೋ ಏನೋ.

ನಾವು ಗಂಗಾನದಿ ತೀರದಲ್ಲಿ ನಿಂತಿದ್ದ ಹಾಗೆಯೇ ವಿಚಿತ್ರ ನೋಟ ಕಾಣುತ್ತಿತ್ತು: ಒಂದು ಮೂಲೆಯಲ್ಲಿ ಮೂವರು ಹೆಂಗಸರು, ನಾಲ್ಕಾರು ಮಕ್ಕಳು ಮೂಗು ಮುಚ್ಚಿಕೊಂಡು ಮುಳುಗು ಹಾಕುತ್ತಿದ್ದರೆ, ಇನ್ನೊಂದೆಡೆ ತೇಲಿ ಬಂದಿದ್ದ ಕೊಳೆತ ಶವದ ಮಹಾಭೋಜನದಲ್ಲಿ ಹದ್ದುಗಳು ತೊಡಗಿದ್ದವು. ನಮ್ಮ ಹಾಗೆಯೇ ಕಾಶಿ ನೋಡಲು ಬಂದಿದ್ದ ಕುಟುಂಬದವರ ಬಳಿ ಮೂವರು ಜನಿವಾರಧಾರಿ ಬಾಲಕರು "ಬ್ರಾಹ್ಮಣರಿಗೆ ಮಧ್ಯಾಹ್ನ ಊಟಕ್ಕಾದರೂ ದಾನಮಾಡಿ" ಎಂದು ಅಂಗಲಾಚುತ್ತಿದ್ದರು. ಗಂಗೆಯ ಭಯಂಕರ ಸ್ವರೂಪ ನೋಡಿ ಸ್ಪರ್ಶಿಸಲು ಮನಸ್ಸಾಗದೆ ನಾವು ಹಾಗೇ ಹಿಂದಿರುಗಿದೆವು.

ಕಾಶಿ ವಿಶ್ವನಾಥ ದೇವಸ್ಥಾನದ ಆವರಣದಲ್ಲಿ ಸರ್ಪಕಾವಲಿನಂತಿದ್ದ ಪೊಲೀಸರನ್ನು ಕಂಡು ಆಶ್ಚರ್ಯವಾಯ್ತು. ವಿಚಾರಿಸಲಾಗಿ, ದೇವರ ಆಭರಣಗಳನ್ನು ಕಾಯುವ ಹೊಣೆ ಈ ಪೊಲೀಸರದ್ದು ಎಂದು ತಿಳಿದಾಗ ತಮಾಷೆ ಎನಿಸಿತು. ತನ್ನ ಆಭರಣಗಳನ್ನೂ ಕಾಯ್ದುಕೊಳ್ಳದ ವಿಶ್ವನಾಥ ಅದು ಹೇಗೆ ಜಗತ್ತಿನ ಜನರ ಹಿತಕಾಯುತ್ತಾನೋ !

ದೇವಸ್ಥಾನದ ಆವರಣದಲ್ಲಿ ಎತ್ತ ನೋಡಿದರೂ ಬೋಳು ತಲೆಯ, ಜುಟ್ಟು–ಜನಿವಾರಧಾರಿ ಬ್ರಾಹ್ಮಣರೇ ಕಾಣುತ್ತಿದ್ದರು. ಕಾಶಿಯಲ್ಲಿ ಹರಿಶ್ಚಂದ್ರ ಘಾಟ್ ಎಂದು ಹೆಸರಾಗಿರುವ ಸುಡುಗಾಡು ರಣಹದ್ದುಗಳಿಂದ ತುಂಬಿರುವುದು ನೆನಪಾಯಿತು.

ಭಾರತದ ಪ್ರಥಮ ರಾಷ್ಟ್ರಪತಿ ಡಾ॥ ರಾಜೇಂದ್ರ ಪ್ರಸಾದ್ ಇದೇ ಕಾಶಿಯಲ್ಲಿ ಅಲ್ಲವೇ ಬ್ರಾಹ್ಮಣರ ಪಾದ ತೊಳೆದು, ಆ ನೀರು ಕುಡಿದ ನಾಚಿಕೆ ಗೇಡಿ ಕೃತ್ಯದಲ್ಲಿ ಭಾಗಿಯಾಗಿದ್ದು; ಸಂಸತ್ತಿನಲ್ಲಿ ಈ ಘಟನೆಯನ್ನು ಡಾ॥ ರಾಮಮನೋಹರ ಲೋಹಿಯಾ ಉಗ್ರವಾಗಿ ಖಂಡಿಸಿದ್ದು ಎಂಬುದೆಲ್ಲ ನೆನಪಾಯ್ತು.

ದೆಹಲಿ ಗದ್ದುಗೆಯ ವಿಚಾರದಲ್ಲಿ ಸದಾ ಮುಂದೆ ಬಂದು ನಿಲ್ಲುವ ಉ.ಪ್ರದೇಶದ ಈ ಅಧಿಕಾರರಹಿತ ಪ್ರಬಲ ಕೇಂದ್ರದಬಗ್ಗೆ ನಿಗೂಢತೆ ನನ್ನನ್ನು ಮುತ್ತಿತ್ತು. ಈಚೆಗೆ ವಿಶ್ವನಾಥ ಪ್ರತಾಪ್ ಸಿಂಗ್ ಎಂಬ ಠಾಕೂರ್‌ನನ್ನು ಕೂಡ ತಮ್ಮ ಆಶಿರ್ವಾದದ ಬಲೆಯೊಳಗೆ ಸಿಕ್ಕಿಸಲು ಬ್ರಾಹ್ಮಣವರ್ಗ ಯತ್ನಿಸಿ ಯಶಸ್ವಿಯಾಗಿದ್ದು ಇಲ್ಲೇ ಅಲ್ಲವೇ ಎಂದೂ ನನ್ನಲ್ಲೇ ಪ್ರಶ್ನಿಸಿಕೊಂಡೆ.

ಆಗಸ್ಟ್ 29 ರಂದು ಬಿಹಾರದ ಗಿರಡೀಹ್ ಜಿಲ್ಲೆಯ ಕೊಲ್ನಾಟ್ ಗ್ರಾಮಕ್ಕೆ ಹೋಗಬೇಕಿತ್ತು. ಅಲ್ಲಿ ಆದಿವಾಸಿಗಳ ಸಮ್ಮೇಳನ ನಡೆಯಲಿತ್ತು. ವಾರಣಾಸಿಯಿಂದ ರೈಲಿನಲ್ಲಿ ಪ್ಯಾರಾಸ್ನಗೆ ಹೋಗಿ, ರಾತ್ರಿ ರೈಲುನಿಲ್ದಾಣದಲ್ಲೇ ಕಳೆದು ಬೆಳಗಿನಜಾವ ಮೆಟೋಡಾರ್‌ನಲ್ಲಿ ಕೊಲ್ನಾಟ್ ದಾರಿ ಹಿಡಿದೆವು. ದಾರಿಯುದ್ದಕ್ಕೂ ನನ್ನ ಜತೆಗಿದ್ದ ಗೆಳೆಯರು ಹಿಂದಿಯಲ್ಲಿ ಕ್ರಾಂತಿಗೀತೆ ಹೇಳುತ್ತಿದ್ದರು. ದಲಿತರ ಕಗ್ಗೊಲೆಗಳಿಗೆ ಕುಖ್ಯಾತವಾಗಿರುವ ಬಿಹಾರದ ಬೆಲ್ಚಿ, ಪಿಪ್ರಾ, ಪಾರಸ್‌ಬಿಘಾ, ಕೆಸ್ತಾರಾ ಮುಂತಾದವು ನನ್ನ ಕಣ್ಣೆದುರು ಸುಳಿದವು. ನನ್ನ ಮನಸ್ಸಿಗೆ ತಂತಾನೇ 'ಕೊಂದೊ

---

## ನಾನು ನಾಲ್ಕಾಣೆ ಜೀತಕ್ಕಿದ್ದೆ

ಗಿರಡೀಹ್ ಜಿಲ್ಲೆಯ ಆದಿವಾಸಿಗಳಲ್ಲಿ ಹತ್ತಾರು ಪಂಗಡಗಳಿವೆ. ಕೋಲ್, ಮೊಹಾಲಿ ಡೋಂ, ಮುನ್ನಾಡಾ, ಕಾರ್ವಾಡಿ, ಮೋದಿ, ಉರಾಂವ್, ಭಿಲ್, ಮುರ್ಮು ಮತ್ತು ಸಂತಾಲ್–ಇತ್ಯಾದಿ. ಪಂಗಡಗಳು ಯಾವುವೂ ಸಹ ಭೋಜನ ಇತ್ಯಾದಿ ಮಾಡುವುದಿಲ್ಲ. ಅಂತರ ಪಂಗಡ ವಿವಾಹವಂತೂ ತುಂಬಾ ಅಪರೂಪ.

ಅಂದಿನ ಆದಿವಾಸಿ ಸಮ್ಮೇಳನದಲ್ಲಿ ಪರಿಚಯವಾದವರೊಬ್ಬರು ತಮ್ಮ ಜೀವನದ ಬಗ್ಗೆ ಹೇಳುತ್ತಿದ್ದರು : "ಏಳನೇ ತರಗತಿವರೆಗೆ ಓದಿದ ನಂತರ ನನ್ನನ್ನು ತಂದೆ ಶಾಲೆ ಬಿಡಿಸಿದರು. ಪಕ್ಕದ ಹಳ್ಳಿಯ ಶ್ರೀಮಂತ ಬನಿಯಾ ಒಬ್ಬರಲ್ಲಿ ಬರೀ ನಾಲ್ಕು ಆಣೆಗೆ ಜೀತಕ್ಕಿಟ್ಟರು. ನಾನು ದಿನನಿತ್ಯ 16 ಗಂಟೆ ಕೆಲಸ ಮಾಡುತ್ತಿದ್ದೆ, ದನದ ಕೊಟ್ಟಿಗೆಯಲ್ಲಿ ಮಲಗುತ್ತಿದ್ದೆ.

ಕೊನೆಗೊಂದು ದಿನ ಇಬ್ಬರು ಜತೆಯವರ ಜತೆಗೆ ಕಲ್ಲಿದ್ದಲು ಗಣಿಗೆ ಕೆಲಸ ಹುಡುಕಿ ಹೋದೆ. ಆದರೆ ನಾಲ್ಕುದಿನ ಅಲೆದಾಡಿದ ನಂತರವೂ ಅಲ್ಲಿ ಕೆಲಸ ಸಿಗಲಿಲ್ಲ. ಈಗ ಇದೇ ಊರಲ್ಲಿದ್ದೇನೆ. ಕಾಡು ನಂಬಿದ್ದೇನೆ, ಭೂಮಿ, ಮಳೆ ನಂಬಿದ್ದೇನೆ. ನಮ್ಮ ಸಂಘಟನೆಯಲ್ಲೂ ಈಗ ಸಕ್ರಿಯನಾಗಿರುವೆ."

ಝಾರಖಂಡ ರೈತ–ಕೂಲಿಕಾರ ಸಂಘಟನೆಯಲ್ಲಿ ಚುರುಕಾಗಿ ಕೆಲಸ ಮಾಡುತ್ತಿರುವ ಅವರು "ನಮ್ಮ ಓಟು ಕಿತ್ತುಕೊಂಡು ಹೋದ ಕಾಂಗ್ರೆಸವರು ನಮ್ಮ ಕಾಡು, ಬದುಕು ಲೂಟಿ ಮಾಡಿದರು. ನಮ್ಮವರೇ ಕಟ್ಟಿದ ಝಾರಖಂಡ ಮುಕ್ತಿ ಮೋರ್ಚಾದವರು ಕೂಡಾ ಏನೂ ಮಾಡಲಿಲ್ಲ. ಅವರು ಲೋಕಸಭಾ ಸದಸ್ಯರಾದರು. ಬಿಹಾರ ವಿಧಾನಸಭೆಗೂ ಆರಿಸಿ ಕಳಿಸಿದೆವು. ಆದರೆ ನಮ್ಮ ಬದುಕು ಹಾಗೇ ಉಳಿಯಿತು. ಈಗ ಮತ್ತೆ ಸಂಘಟನೆ, ಸಂಘರ್ಷವೊಂದೇ ದಾರಿ" ಎಂದರು.

ರ್‍ಯಾರವ್ವ ನನ ಹುಂಜನ' ಎಂಬ ಹಾಡು ನೆನಪಾಯಿತು; ಬೆಲ್ಚಿ ಸಂಘರ್ಷದ ಮಹಾನಾಯಕ ಸಿಂಘ್ವಾನ ದನಿ ನನ್ನ ಕಿವಿಗಳಲ್ಲಿ ಗುಂಯ್‌ಗುಡುತ್ತಿತ್ತು,

ಬಂದರ ಕುಪ್ಪೆ ಎಂಬಲ್ಲಿ ಮೆಟಾಡೊರ್ ನಿಂತಾಗ ಏಳು ಗಂಟೆಯಾಗಿರಬಹುದು. ಜಿಟಿ ಜಿಟಿ ಮಳೆ ಸುರಿಯುತ್ತಿತ್ತು. ಕೊಲ್ನಾಟ್ ಗ್ರಾಮ ಅಲ್ಲಿಂದ ಮೂರು ಕಿ. ಮಿ. ದೂರ ಇತ್ತು. ಅಲ್ಲಿಯೇ ಕಡ್ಲೆಪುರಿ ತಿಂದು ಹಾಲಿಲ್ಲದ ಟೀ ಕುಡಿದು ಕೊಲ್ನಾಟ್‌ನತ್ತ ಗುಂಪಾಗಿ ಸಾಗಿದೆವು.

ಕರ್ನಾಟಕದ ಬಯಲುಸೀಮೆ 25–30 ವರ್ಷಗಳ ಹಿಂದೆ ಹೀಗಿತ್ತೋ ಏನೋ. ಮಧ್ಯೆ ಬರುತ್ತಿದ್ದ ಪುಟ್ಟ ಝುರಿ, ಕಾಲುವೆಗಳನ್ನು ದಾಟುತ್ತ, ನೀರು ಹರಿಯುವ ಸದ್ದಿನಿಂದ ಮುದಗೊಳ್ಳುತ್ತ ಮುಂದುವರೆಯುತ್ತಿದ್ದೆವು.

ಕೊಲ್ನಾಟ್‌ನ ನುನುಲಾಲ್‌ಜಿ ಮನೆ ಬಳಿ ಬಂದೆವು. ಅಲ್ಲಿ ಬಿಲ್ಲುಬಾಣಗಳು ತೂಗುತ್ತಿದ್ದವು. ಬಹುತೇಕವಾಗಿ ಎಲ್ಲಾ ಆದಿವಾಸಿಗಳ ಮನೆಯಲ್ಲಿ ಬಿಲ್ಲು-ಬಾಣಗಳು ಇರುತ್ತವೆ. ಅವರ ಜೀವನಾವಶ್ಯಕ ಆಯುಧಗಳು. ಮನೆಯಿಂದ ಅವರು ಹೊರಬಿದ್ದರೆ ಎಡ ಭುಜಕ್ಕೆ ಬಿಲ್ಲು ನೇತಾಡಿದರೆ ಬೆನ್ನಿನ ಬಲಭಾಗದ ಮೇಲೆ ಬತ್ತಳಿಕೆ ಏರುತ್ತದೆ.

ಸರಿಯಾದ ರಸ್ತೆ, ವಿದ್ಯುತ್ ಇಲ್ಲದ ಈ ಕುಗ್ರಾಮದಲ್ಲಿ ಶಾಲೆ ಎಂಬುದೊಂದಿತ್ತು. ತುಂಡು ಲಂಗೋಟಿ ಮಾತ್ರ ಕಟ್ಟಿಕೊಂಡಿದ್ದ ಹತ್ತೆಂಟು ಆದಿವಾಸಿ ಬಾಲ-ಬಾಲೆಯರು ಶಾಲೆಯಲ್ಲಿದ್ದರು. ಕೊಲ್ನಾಟ್ ಗ್ರಾಮದ ಜನರೊಂದಿಗೆ ಬೆರೆತು ಮಾತನಾಡುತ್ತಾ ಆ ದಿನ ಕಳೆದೆವು.

ಆದಿವಾಸಿಗಳ ಸಮ್ಮೇಳನಕ್ಕೆ ಇನ್ನೂ ಒಂದು ದಿನವಿತ್ತು. ಕೊಲ್ನಾಟ್‌ಗೆ ಬುದ್ಧಗಯಾ ತುಂಬಾ ಹತ್ತಿರವೆಂದು ತಿಳಿದಾಗ ಅಲ್ಲಿಗೆ ಹೋಗಬೇಕೆಂದು ನಿರ್ಧರಿಸಿದೆವು. ಜಗತ್ತಿಗೆ ಬೆಳಕು ತೋರಿಸುವ ಸಿದ್ಧಾಂತ ಮಂಡಿಸಿ ಬಾಳಿದ ಗೌತಮ ಬುದ್ಧನ ನೆಲೆಯನ್ನು ನೋಡಲು ತವಕವುಂಟಾಯಿತು. ಅಲ್ಲಿನ ಮಹಂತನ ವಿರುದ್ಧ ಛಾತ್ರ ಯುವ ಸಂಘರ್ಷ ವಾಹಿನಿಯವರು ಹೋರಾಟ ಮಾಡಿ ಭೂರಹಿತರಿಗೆ ಆರು ಸಾವಿರ ಎಕರೆ ಭೂಮಿಯನ್ನು ಕೊಡಿಸಿದ ಸಂಗತಿ ತಿಳಿದ ನಂತರ ಅಲ್ಲಿಗೆ ಹೋಗಲೇಬೇಕೆಂಬ ಮನಸಾಯಿತು.

ಮರುದಿನ ನಾವು ಬುದ್ಧಗಯಾಗೆ ಹೋದೆವು. ಮೈಸೂರಿನ ಬೃಂದಾವನದಂಥ ಸುಂದರ ಪರಿಸರ ಅದು. ಬಾನೆತ್ತರದ ಬುದ್ಧನ ಸ್ತೂಪ ಮೈಲು ದೂರದಿಂದಲೇ ಸ್ವಾಗತಿಸುತ್ತಿತ್ತು. ತನ್ನ ಸಂದೇಶವನ್ನು ಬುದ್ಧ ಈ ಸ್ತೂಪದ ಮುಖಾಂತರ ಬಾನಿಗೂ ಒಯ್ಯುತ್ತಿರುವನೇನೋ ಎನಿಸಿತು.

ಸಾಯಂಕಾಲ ಹಿಂಡು ಹಿಂಡಾಗಿ ಬಂದ ಪಾರಿವಾಳಗಳು ಸ್ತೂಪದ ಮೇಲೆ ಕುಳಿತಿದ್ದವು. ಹಸಿರು ಮಿಶ್ರಿತ ನೀಲಿ ರೆಕ್ಕೆಗಳ ಈ ಪಾರಿವಾಳಗಳು ಬುದ್ಧ ಸಂದೇಶದ ದೂತರೆಂಬಂತೆ ಕಾಣುತ್ತಿದ್ದವು. ದೂರದಿ ಕಪಿಲಾ ನದಿಯಲ್ಲಿ ಸೂರ್ಯ ಮುಳುಗುತ್ತಿದ್ದ. ತಲೆ ಮೇಲೆ ಸೌದೆ, ಹುಲ್ಲು ಹೊತ್ತು ಸಾಗಿದ್ದ ಕೂಲಿ ಹೆಣ್ಣುಗಳ ಹಾಡು ನಮ್ಮ ಹೃದಯ ತಟ್ಟುತ್ತಿತ್ತು. ಬುದ್ಧನೇ ಪ್ರಕೃತಿಯಲ್ಲಿ ಲೀನಗೊಂಡಂತಿತ್ತು

ಬುದ್ಧವಿಹಾರ ಮಾತ್ರ ಅನಾಥನಂತೆ ಬಿದ್ದುಕೊಂಡಿತ್ತು. ಅಲ್ಲಿನ ನೀರವ ಮೌನದಲ್ಲಿ ಬುದ್ಧ ವಿಹಾರ ತನ್ನ ಬಿಕ್ಕಳಿಕೆಯನ್ನೂ ತೋರ್ಪಡಿಸುತ್ತಿರಲಿಲ್ಲ. ಮಹಾಯಾನ ಟ್ರಸ್ಟ್ ಕಬಳಿಸಿದ್ದ ಬ್ರಾಹ್ಮಣರು ಬುದ್ಧನನ್ನು ಮಹಾವಿಷ್ಣುವಿನ ಒಂಬತ್ತನೇ ಅವತಾರವಾಗಿಸಿದ್ದರು. ಬೋಧಿವೃಕ್ಷದ ಕೆಳಗಿನ ನೀರಿನ ಕೊಳದಲ್ಲಿ ಬೆಳೆಸಿದ್ದ ಕಮಲ ಪುಷ್ಪದ ಮೇಲೆ ಬುದ್ಧ ವಿಶ್ರಮಿಸಿಕೊಳ್ಳುತ್ತಿರುವ ಪ್ರತಿಮೆಯಿಟ್ಟಿದ್ದರು, ಅಂತೂ ಬುದ್ಧನನ್ನು ಅವನು ತಿರಸ್ಕರಿಸಿ ನಡೆದಿದ್ದ ಹಿಂದೂ ಧರ್ಮದಲ್ಲೇ ಬಂಧಿಸಿಟ್ಟಿದ್ದರು.

ಇನ್ನೊಂದು ಬದಿಯಲ್ಲಿ ಟಿಬೆಟ್. ನೇಪಾಳ, ಮಲೇಷಿಯಾ, ಜಪಾನ್ ಮುಂತಾದ ದೇಶಗಳಲ್ಲಿ ಪ್ರಚಲಿತವಿರುವ ರೂಪದ ಬುದ್ಧ ಮೂರ್ತಿಗಳನ್ನು ನೋಡಿದೆವು. ಅಂತರರಾಷ್ಟ್ರೀಯ

(5ನೇ ಪುಟಕ್ಕೆ)

## ಬೆಲ್ಚಿಯ ಗಾಯಗಳೊಂದಿಗೆ.......

ಆದಿವಾಸಿ ಸಮ್ಮೇಳನಕ್ಕೆ ಕುಖ್ಯಾತ ಗ್ರಾಮ ಬೆಲ್ಚಿ ಬಳಿಯ ಹಳ್ಳಿಯಿಂದ ಸೋಹಿಚಂದ್ರ ಎಂಬುವರು ಬಂದಿದ್ದರು. ಅವರು ಸಮತಾ ಸಂಘಟನೆಯವರು. ಅವರೊಂದಿಗೂ ನಾವು ಮಾತನಾಡಿದೆವು.

ಬೆಲ್ಚಿ ನರಹತ್ಯೆ ಪ್ರಕರಣದ ಕೊಲೆಗಾರರಿಗೆ ಶಿಕ್ಷೆಯಾಯಿತಲ್ಲವೇ?

ಹೌದು. 1977ರಲ್ಲಿ ನಡೆದ 11 ಜನ ದಲಿತರ ಈ ಭೀಕರ ನರಹತ್ಯೆಯ ಇಬ್ಬರು ಅಪರಾಧಿಗಳಿಗೆ ಮರಣದಂಡನೆಯಾಯಿತು. ಈ ಇಬ್ಬರು ಕೊಲೆಗಾರರೇನೋ ನಿಜ ಆದರೆ ಅವರು ಬಾಡಿಗೆ ಕೊಲೆಗಾರರು. ಬೆಲ್ಚಿ ಗ್ರಾಮದ ನರಹತ್ಯೆಗೆ ಕಾರಣರಾದವರು ಮಾತ್ರ ಆರಾಮಾಗಿದ್ದಾರೆ. ಅವರ ಹೆಸರು ಕೂಡ ಈ ಪ್ರಕರಣವಲ್ಲಿ ಕೇಳಿ ಬರಲಿಲ್ಲ. ಬೆಲ್ಚಿ ನರಹತ್ಯೆಗೆ ಪ್ರೇರೆಪಿಸಿದವರೊಬ್ಬರು ಇಂದು ಕಾಂಗ್ರೆಸ್ ಸಂಸತ್‌ಸದಸ್ಯರಾಗಿದ್ದಾರೆ.

ಬಿಹಾರದಲ್ಲಿ ದಲಿತರ ಕಗ್ಗೊಲೆಗಳು ಮತ್ತೆ ಮತ್ತೆ ಆಗುವುದೇಕೆ?

ಈ ರಾಜ್ಯದ ಪರಿಸ್ಥಿತಿಯೇ ಹಾಗಿದೆ. ಭೂಸುಧಾರಣೆ ಕಾನೂನು ಇಲ್ಲಿ ಜಾರಿಗೆ ಬಂದಿಲ್ಲ. ರಾಜಕೀಯ ಅಧಿಕಾರ ಹೊಂದಿರುವ ಪ್ರಬಲ ಕೋಮುಗಳ ಕೈಯಲ್ಲೇ (ಉದಾ: ರಜಪೂತ್. ಬ್ರಾಹ್ಮಣ ಭೂಮಿಹಾರ್ ಇತ್ಯಾದಿ) ಭೂಮಿಯೂ ಸೇರಿ ಹೋಗಿದೆ ಇವರ ಜನಸಂಖ್ಯೆ ಬರೀ ಶೇ. 10ರಷ್ಟು ಆದರೆ ರಾಜ್ಯದಲ್ಲಿ ಶೇ. 60ರಷ್ಟಾದರೂ ಭೂಮಿ ಇವರ ಕೈಯಲ್ಲಿದೆ.

ಬಿಹಾರದಲ್ಲಿ ರಾಜಕಾರಣಿ – ಅಧಿಕಾರಶಾಹಿ ಕ್ರಿಮಿನಲ್ಸ್‌ಗಳ ಬಲಾಢ್ಯ ಬಣಗಳಿವೆ. ಕಾಂಗ್ರೆಸ್, ಜನತಾ,ಲೋಕದಳ ಎಲ್ಲಾ ಪಕ್ಷಗಳಿಗೂ ತಮ್ಮದೇ ಆದ ಇಂಥ ಬಣಗಳಿವೆ. ಚುನಾವಣೆ ಸಮಯದಲ್ಲಿ ಮತಪೆಟ್ಟಿಗೆ ದರೋಡೆ ಮಾಡುವ ಕ್ರಿಮಿನಲ್ಸ್‌ಗಳನ್ನು ಆಯಾ ಪಕ್ಷದ ರಾಜಕಾರಣಿಗಳು, ಅಧಿಕಾರಶಾಹಿ ಏನಾದರೂ ಮಾಡಿ ಬಚಾವ್ ಮಾಡುತ್ತಾರೆ. ಹೆಚ್ಚು ಕೊಲೆಗಳು; ದರೋಡೆಗಳು ಹಾಡು ಹಗಲೇ ಲೂಟಿಗಳನ್ನು ಮಾಡಿಸಿದವರೇ ಇಲ್ಲಿ ಹೀರೋ ಆಗುತ್ತಾರೆ; ಅವರೇ ಆರಿಸಿ ಬರ್‍ತಾರೆ.

ಬೆಲ್ಚಿ ಸುತ್ತಲ ದಲಿತರ ಬದುಕು ಹೇಗಿದೆ?

ಹಿಂದೆ ರಜಪೂತ್, ಭೂ ಮಾ ಲೀ ಕ ರಿಗೆ 'ಬಾಡಿಗಾರ್ಡ್' ಆಗಿದ್ದ ದುಸಾದ್ ಪಂಗಡ ಸ್ವಾಭಿಮಾನಕ್ಕೆ ಹೆಸರುವಾಸಿ. ಚಮ್ಮಾರರಲ್ಲಿ ವಿದ್ಯಾವಂತರು ಹೆಚ್ಚು. ಹಾಗಾಗಿಯೇ ಬಿಹಾರದಲ್ಲಿ ಕೊಲೆಯಾಗುವ ದಲಿತರಲ್ಲಿ ದುಸಾಧ್ ಮತ್ತು ಚಮ್ಮಾರ ಪಂಗಡದವರೇ ಜಾಸ್ತಿ.

ಬಿಹಾರದ ಬಹುತೇಕ ಕಡೆ ಈಗಲೂ ಬಿಟ್ಟಿ ಕೆಲಸ ಮಾಡಿಸಿಕೊಳ್ಳುವ ಪದ್ಧತಿಯಿದೆ. ದಲಿತ ವರ್ಗದವರು ಭೂಮಾಲಿಕರು, ಸರ್ಕಾರಿ ಅಧಿಕಾರಿಗಳು ಹಾಗೂ ಕಂಟ್ರಾಕ್ಟರ್–ಲೇವಾದೇವಿಗಾರರು ಹೇಳುವ ಯಾವುದೇ ಕೆಲಸವನ್ನು ಮಾಡಬೇಕು. ತಮ್ಮ ಮನೆಯ ಕೆಲಸ ಬಿಟ್ಟು ಬಂದು ಮಾಡಬೇಕು. ಇಲ್ಲದಿದ್ದರೆ ಗ್ರಾಮದ ತಳವಾರನ್ ಇವರ ಆಜ್ಞೆ ಮೇರೆಗೆ ಅಂಥ ದಲಿತನ ಮನೆಗೆ ಹೋಗಿ ಅವನನ್ನು ಎಳೆದು ತರುತ್ತಾನೆ. ಪ್ರತಿಭಟಿಸಿದರೆ ಆವನ ಹೆಂಡತಿ-ಮಕ್ಕಳ ಮುಡಿ ಹಿಡಿದೆಳೆದು ಚಾವಡಿಗೆ ತರುತ್ತಾರೆ.

ಒಟ್ಟಿನಲ್ಲಿ ದಲಿತ ವರ್ಗಗಳು ಪಶುಗಳಿಂತ ಕಡೆಯಾಗಿ ದುಡಿಯಬೇಕು ; ಪ್ರತಿ ನುಡಿ ಆಡಿದರೆ ಚಾವಟಿ ಬೀಸುತ್ತದೆ ಗುಂಡು ಹಾರುತ್ತದೆ ಹೆಣ ಉರುಳುತ್ತದೆ. ಹೆಣಗಳನ್ನು ತನ್ನ ಮಡಿಲಿಗೆ ಎಳೆದುಕೊಳ್ಳಲು ಹೇಗೂ ಕಪಿಲೆ, ಗಂಗೆಮುಂತಾದವರು ಇದ್ದಾರಲ್ಲ........

ಸಮತಾ ಸಂಘಟನೆಯ ಗೆಳೆಯ ಹೇಳುತ್ತಿದ್ದಂತೆ ಆತನ ಧ್ವನಿ ಕಟ್ಟುತ್ತಿತ್ತು ನಮ್ಮ; ಕಣ್ಣಲೂ ತೇವಗೊಂಡಿದ್ದವು.

ಬೌದ್ಧ ಸೋದರ ಸಂಘ ಕಟ್ಟಿಸಿದ್ದ ಕಪ್ಪು ಅಮೃತಶಿಲೆಯಲ್ಲಿನ ಬುದ್ಧ ಪ್ರತಿಮೆ ನಯನಮನೋಹರವಾಗಿತ್ತು.

ಬುದ್ಧನು ತನಗೆ ಮನದಟ್ಟಾದ ಸತ್ಯವೊಂದನ್ನು ಮೊಟ್ಟಮೊದಲು ಪ್ರಕಟಗೊಳಿಸಿದ್ದು ಸಾರಾನಾಥನಲ್ಲಿ. ನಾವು ಅಲ್ಲಿಗೂ ಹೋಗಿ ಮಹಾಯಾನ ಪಂಥದ ಟ್ರಸ್ಟ್ ನಡೆಸುತ್ತಿರುವ ಆಶ್ರಮವನ್ನು ನೋಡಿದೆವು. ಸುಂದರವನದ ನಡುವಣ ನೀರು ಹಕ್ಕಿಗಳು ಇರುವ ಕೊಳ ಮನಮೋಹಕವಾಗಿದೆ. ರೆಕ್ಕೆ ಬಿಚ್ಚಿ ಓಡಾಡುವ ನೀರು ಹಕ್ಕಿಗಳನ್ನು ನೋಡುತ್ತಲೇ ಇರಬೇಕೆನಿಸುತ್ತದೆ.

ಬುದ್ಧ ಅನುಯಾಯಿಯೊಬ್ಬ ಬುದ್ಧನ ಚಿತ್ರ ಬಿಡಿಸಿ, ಕ್ಯಾಲೆಂಡರ್‌ಗಳನ್ನು ಮುದ್ರಿಸಿ ಪ್ರಪಂಚದ ಎಲ್ಲಾ ಭಾಗಗಳಲ್ಲಿ ಸುತ್ತಿ ಮಾರಾಟ ಮಾಡಿ ಗಳಿಸಿದ ಹಣದಿಂದ ನಿರ್ಮಿಸಿದ್ದೆಂದು ಹೇಳಲಾದ ಸ್ತೂಪದ ಬಗ್ಗೆ ತಿಳಿದೆವು. ಆ ಬುದ್ಧಪ್ರಿಯನ ಅದಮ್ಯ ಛಲದ ಬಗ್ಗೆ ಮೆಚ್ಚುಗೆ ಮೂಡುತ್ತದೆ. ಹೃದಯ ತಂತಾನೇ ಆ ಕಡೆ ಒಲಿಯುತ್ತದೆ. ನಾವು ಹೋದಾಗ ಬಂದಿದ್ದ ವಿದೇಶಿ ಪ್ರವಾಸಿಗರಿಗೆ ಅಲ್ಲಿನ ಮಾರ್ಗದರ್ಶಿಯೊಬ್ಬ ತಪ್ಪು ತಪ್ಪಾಗಿ ವಿವರಣೆ ನೀಡುತ್ತಿದ್ದ. ಬುದ್ಧಗಯಾದಲ್ಲೂ ಹೀಗೇ ಆಗಿತ್ತು. ಸಾರಾನಾಥ್ ಮತ್ತು ಬುದ್ಧಗಯಾ ಎರಡೂ ಕಡೆ ಬುದ್ಧ ವಿಹಾರ ಕೇಂದ್ರಗಳ ಮೇಲೆ ಹತೋಟಿ ಹೊಂದಿರುವ ಮಹಾಯಾನ ಪಂಥದ ಬ್ರಾಹ್ಮಣಶಾಹಿ ಮೌಲ್ಯಗಳ ವಕಾಲತ್ತು ಹಾಗೂ ಈ ಮಾರ್ಗದರ್ಶಿಗಳ ತಪ್ಪು ಮಾಹಿತಿ ನೀಡುವ ಕ್ರಮ ಏನನ್ನು ಹೇಳುತ್ತದೆ? ಎಂಥ ಕ್ರಾಂತಿ ಕಾರಿ ಹೋರಾಟ–ಚಿಂತನೆಗಳನ್ನೂ ನುಂಗಿ ಅರಗಿಸಿಕೊಳ್ಳುವ ಹಿಂದೂ ಧರ್ಮದ ಖೂಳ ಮನಸ್ಸನ್ನೇ ಅಲ್ಲವೇ?

ಕೊಲ್ನಾಟದಲ್ಲಿ ನಡೆದ ಆದಿವಾಸಿಗಳ ಸಮ್ಮೇಳನ ವಿಶಿಷ್ಟವಾಗಿತ್ತು. ಬಿಹಾರದ ನಾಕಾರು ಜಿಲ್ಲೆಗಳಿಂದ ಬಂದಿದ್ದ ನೂರಾರು ಆದಿವಾಸಿಗಳು ಭಾಗವಹಿಸಿದ್ದ ಸಮ್ಮೇಳನವನ್ನು ಸಮತಾ ಸಂಘಟನೆಯ ನಾಯಕ, ಸಮಾಜವಾದಿ ಚಿಂತಕ ಕಿಶನ್ ಪಟ್ನಾಯಕ್ ಉದ್ಘಾಟಿಸಿದರು. ಆದಿವಾಸಿಗಳನ್ನು ನಿರಂತರವಾಗಿ ಶೋಷಣೆ ಮಾಡುತ್ತ ಬಂದಿರುವ ನೀತಿಯನ್ನು ವಿವರಿಸಿದ ಅವರು ಹೊಸ ಸಮಾಜವ್ಯವಸ್ಥೆ ರಚಿಸಲು ಮುಂದಾಗಬೇಕೆಂದು ಕರೆ ನೀಡಿದರು. ಆದಿವಾಸಿಗಳ ಮುಖಂಡರಾದ ನುನುಲಾಲ್ ಮರಾಂದಿ, ಸೀತಾರಾಂ ಮರ್ಮು, ಭಯ್ಯ ವಸಡೆ ಮುಂತಾದವರು ಮಾತನಾಡಿ ಆದಿವಾಸಿಗಳ ಏಕತೆಯ ಬಗ್ಗೆ ಒತ್ತಿ ಹೇಳಿದರು.

ಗಿರಡೀಹು ಜಿಲ್ಲೆಯ ಯಾವುದೇ ಭಾಗಕ್ಕೂ ಸರ್ಕಾರದ ಸೌಲಭ್ಯಗಳು ಮುಟ್ಟಿಲ್ಲದಿರುವುದನ್ನು ಖಂಡಿಸಿದ ಅವರು ದಿನೇ ದಿನೇ ನಾಶವಾಗುತ್ತಿರುವ ಕಾಡಿನಿಂದಾಗಿ ಆದಿವಾಸಿಗಳ ಬದುಕಿಗೆ ಭಯಂಕರ ಆಘಾತ ಉಂಟಾಗಿದೆ ಎಂದರು. ಮಳೆಯನ್ನೇ ನಂಬಿ ಬೇಸಾಯ ಮಾಡುತ್ತಿರುವ ಇಲ್ಲಿನ ಆದಿವಾಸಿಗಳು ಕಾಡು-ಮೇಡು ಅಲೆದು ಸೌದೆ ಸಂಗ್ರಹಿಸಿ ಮಾರುವ ಉಪಕಸುಬು ಮಾಡುತ್ತಾರೆ. ಅರಣ್ಯ ಇಲಾಖೆ ಅಧಿಕಾರಿಗಳು ಖಾಸಗಿ ಕಂಟ್ರಾಕ್ಟರ್‌ಗಳು ಹಾಗೂ ಲೇವಾದೇವಿ ವ್ಯವಹಾರ ಮಾಡುವ ಮಾರ್ವಾಡಿಗಳ ನಡುವೆ ಆದಿವಾಸಿಗಳ ಭವಿಷ್ಯ ಮಂಕಾಗಿ ಹೋಗಿದೆ. ತೀರಾ ತೊಂದರೆಯಾದಾಗ ಆದಿವಾಸಿಗಳು ಧನಬಾದ್ ಕಡೆ ವಲಸೆ ಹೋಗಿ ಕಲ್ಲಿದ್ದಲು ಗಣಿಯಲ್ಲಿ ಜೀತದಾಳಾಗಿ ಬಿಡುತ್ತಾರೆ.

ಈಚೆಗೆ ಈ ಭಾಗದಲ್ಲಿ ಆರಂಭವಾಗಿರುವ ಝೂರಖಂಡ ರೈತ ಕೂಲಿಕಾರ ಸಂಘಟನೆಯ ಮೇಲೆ ಹೆಚ್ಚಿನ ಹೊಣೆ ಈಗ ಬಿದ್ದಿದೆ. ಆದಿವಾಸಿಗಳ ಮನಸು ಗೆದ್ದು ಈ ಸಂಘಟನೆ ಮುಂದಡಿಯಿಡ ಬೇಕಿದೆ.

●

## ಧರ್ಮವೇ ಆಗ ನಿನ್ನ........

(ಮೊದಲ ಪುಟದಿಂದ)

ಅವಮಾನದ ನೋವು, ಹೊಟ್ಟೆಯಲ್ಲಿಟ್ಟುಕೊಳ್ಳಲಾಗದ ದಲಿತರು 5-8-87 ರಂದು ಬಾಗೇವಾಡಿ ಪೊಲೀಸರಿಗೆ ದೂರುಕೊಟ್ಟರು. ಇವರ ದೂರು ಖಾಕಿ ಮೃತ ಮನಸ್ಸಿಗೆ ಮೊದಮೊದಲು ನಾಟಲಿಲ್ಲ. ಕೊನೆಗೆ ಇದು ಮೇಲಕ್ಕೆ ಹೋಗಿ ಮುಂದೊಂದು ದಿನ ತಾವೇ ತಮ್ಮ ಕೈಯಾರೆ ಎಲ್ಲಿ ಹೇಲು ತಿನ್ನಬೇಕಾಗುತ್ತದೋ ಎಂದು ಹೆದರಿ ತಾತ್ಸಾರದಿಂದಲೇ ಬೆಂಡಿಗೇರಿಗೆ ಹೋಗಿ ಬಂದರು. ಬಾಗೇವಾಡಿಯ ಸಬ್‌ಇನ್ಸ್‌ಪೆಕ್ಟರ್ ಎಸ್.ವಿ. ಬಾಡವಾಡಗಿ ಹಲ್ಲೆಕೋರರ ಎಂಜಲನ್ನೋ, ಏನನ್ನೋ ನಾಲಗೆಯಿಂದಲೇ ಬಾಚಿ ಬಿಟ್ಟಿದ್ದರಿಂದ ಏನೂ ಕ್ರಮ ಕೈಗೊಳ್ಳದೆ ಸುಮ್ಮನಾದರು.

ಈ ಗೂಂಡಾಗುಂಪಿನ 13 ಜನರಲ್ಲಿ ಗುರುಪಾದಪ್ಪ ಗಂಗಪ್ಪ ಮೇಳದ, ಗೋಪಾಲ ಅಣ್ಣಪ್ಪ ಮೇಳದ, ಯಲ್ಲನಗೌಡ ಬಸವಂಣ್ಣೆಪ್ಪ ಮೇಳದ ಮತ್ತು ಶಿವಪ್ಪ ಬಸವನಗೌಡ ಪಾಟೀಲ ಸಂಗಪ್ಪ ಪಾಂಡೆಪ್ಪ ಚವಾಳಿ ಎಂಬ ಐದು ಜನ ಸರಕಾರಿ ನೌಕರರು. ಇಂಥ ಕೃತ್ಯಕ್ಕೆ ಕೂಡಲೆ ಶಿಕ್ಷೆ ಅನುಭವಿಸಬೇಕಾದವರು. ಇಂಥ ಕೃತ್ಯದಲ್ಲಿ ಎಂದೂ ಬಾಗಿಯಾಗಲೇ ಬಾರದಷ್ಟು ಅಕ್ಷರ, ವಿದ್ಯೆ ಉಳ್ಳವರು.

ಅಕ್ಷರಸ್ಥ ಮನಸ್ಸನ್ನೂ ಬಿಡದೆ ತುಂಬಿಕೊಂಡ ಈ ಜಾತಿ ಮಲದ ಪ್ರಕರಣ ಸೆ. 6 ರಂದು ನಾಡಿನ ಪ್ರಮುಖ ಪತ್ರಿಕೆಗಳಲ್ಲಿ ಸುದ್ದಿಯಾಗಿ ರಾರಾಜಿಸಿತು. ಮುಚ್ಚಿ ಹೋಗಲಿದ್ದ ಈ ಪ್ರಕರಣ ಅದು ಹೇಗೋ ಬೆಳಕು ಕಂಡಿತು.

ಮುಂಜಾನೆಯ ಸುಪ್ರಭಾತ ಕೇಳುತ್ತಾ, ಪತ್ರಿಕೆಗಳ ಮೇಲೆ ಕಣ್ಣಾಡಿಸಿದ ಅಕ್ಷರಸ್ಥ, ಸಂಭಾವಿತ ಜನ ಎಂದಿನಂತೆ ಕಕ್ಕಸ್ಸಿಗೆ ಹೋದರು. ಅರೆ ಎಲ್ಲ ಎಂಥ ಸಲೀಸು? ಅವರ ಗಂಟಲುಗಳಲ್ಲಿ ನಾಷ್ಟಾ ಇಳಿಯಿತು. ಊಟ ಹೋಯಿತು. ಯಥಾ ಪ್ರಕಾರ ದೇವಸ್ಥಾನಗಳಲ್ಲಿ ಪೂಜೆ, ಆರತಿ ಅಭಿಷೇಕ ನಡೆಯಿತು. ಜಗದ್ಗುರುಗಳ ಬಾಯಲ್ಲಿ ಧರ್ಮದ ಪಾವಿತ್ರ್ಯ ಕುರಿತಾದ ಶ್ಲೋಕಗಳು, ಪ್ರವಚನಗಳು ಉದುರಿದುವು. ಮೌಲ್ಯಾಧಾರಿತ ಮಹನೀಯರು ತಮ್ಮ ಮೌಲ್ಯದ ಪುಟಗೋಸಿಯನ್ನು ನಾಡಿನಾದ್ಯಂತ ಮೆರೆಸಿದರು. ಏನಾಶ್ಚರ್ಯ ಇಡೀ ದೇಶ, ಆ ದೇಶದ ಸಂಭಾವಿತ ಸತ್ಯಜೆಗಳು ಏನೂ ನಡೆದೇ ಇಲ್ಲವೆನ್ನುವಂತೆ ಉಸಿರಾಡ್ತಾ, ತಿಂತಾ, ದಿನ ದೂಡಿದರು.

### ತಾಂಬೂಲ ಮೆದ್ದರು

ತಾವು ಹೇತ ಹೇಲನ್ನು ತಾವೇ ಎತ್ತಿ ಹಾಕುವಷ್ಟು ನಾಗರೀಕ ಪ್ರಜ್ಞೆಯಾಗಲಿ, ಕನಿಷ್ಠ ಮಾನ ಮರ್ಯಾದೆಯಾಗಲಿ ಇಲ್ಲದ ಬಹುಸಂಖ್ಯಾತ ಜನವರ್ಗ ಅದಕ್ಕೆಂದೇ ಒಂದು ಜಾತಿಯನ್ನು ಸೃಷ್ಟಿಸಿದ್ದೂ ಅಲ್ಲದೆ ಅವರನ್ನು ಅದೇ ಕಾರಣಕ್ಕೆ ಕೀಳಾಗಿ ಕಾಣುತ್ತಲೂ ಬಂದಿದೆ. ಇದೀಗ ಆ ಮಲಬಾಚಿ ಸ್ವಚ್ಛ ಮಾಡಿದ ಆ ಕೈಗಳಿಂದಲೇ ಮಲ ತಿನ್ನುವಂತೆ ಬಲಾತ್ಕರಿಸಿದೆ. ತಮ್ಮ ಹೊಟ್ಟೆಯಲ್ಲಿ ಅಡಗಿದ್ದ ಮಲವನ್ನೇ ಬಾಯಿಗೆ ತೆಗೆದುಕೊಂಡು ತಾಂಬೂಲದಂತೆ ಮೆಲ್ಲುತ್ತಾ 'ಇದೋ ನೋಡಿ ನಮ್ಮ ತುಟಿ ಎಷ್ಟು ಕೆಂಪು ನಮ್ಮ ಬಾಯಿ ಎಷ್ಟು ಕೆಂಪು' ಎಂದು ಜಗತ್ತಿಗೇ ತೋರಿಸಿಕೊಟ್ಟಿದೆ.

ಇದನ್ನು ಕಂಡೂ ಬಾಯಿ ಬಿಡದ ದರ್ಮದ ಗುತ್ತಿಗೆದಾರರ ಬಾಯಲ್ಲಿ ಇದೇ ಮಲತಾಂಬೂಲ; ಇದೇ ಮೆಲುಕು.

ದ. ಸಂ. ಸ ಬೆಳಗಾವಿಯ ಸದಸ್ಯರು ಇದನ್ನು ಸಹಿಸದೆ ಬೆಂಡಿಗೇರಿಗೆ ಹೋಗಿ ನಡೆದದ್ದೆಲ್ಲವನ್ನೂ ಮತ್ತೊಮ್ಮೆ ಕೇಳಿ, ಕಂಡು, ಸಾಂತ್ವನ ನೀಡಿ ಪೋಲಿಸು ಅಧಿಕಾರಿಗಳಿಗೆ ಕ್ರಮ ತೆಗೆದುಕೊಳ್ಳುವಂತೆ ಒತ್ತಾಯಿಸಿದ್ದಾರೆ.

ತಾ 18-10-87 ರಂದು ಬೆಳಗಾವಿಯಿಂದ ಒಂದು ಸಾವಿರ ಸೈಕಲ್ ರ್‍ಯಾಲಿಯನ್ನು ಬೆಂಡಿಗೇರಿಗ ಕೊಂಡೊಯ್ದು ಅಲ್ಲಿನ ಬೀದಿ ಬೀದಿಗಳಲ್ಲಿ ಮೆರವಣಿಗೆ ನಡೆಸಿದರು, ಗ್ರಾಮಸ್ಥರಲ್ಲಿ ಇನ್ನೂ ಆರದೆ ಉಳಿದಿದ್ದ ವಿವೇಕಕ್ಕೆ ಎಣ್ಣೆ ಸುರಿದರು. ಪರಿಣಾಮವಾಗಿ ಅಂದು ಮೂಕವಾಗಿ ನೋಡುತ್ತಿದ್ದ ಗ್ರಾಮಸ್ಥರ ವಿವೇಕ ಮೊನ್ನೆ ಎಚ್ಚರಗೊಂಡಿತು. ಪರಿಣಾಮವಾಗಿ 18-10-87 ರ ಬಹಿರಂಗ ಸಭೆಯಲ್ಲಿ 2500 ಸಾವಿರ ಗ್ರಾಮಸ್ಥರು ಭಾಗವಹಿಸಿ ಆ ಅಮಾನುಷ ಕೃತ್ಯಕ್ಕೆ ತಮ್ಮ ಅಸಮಧಾನ ವ್ಯಕ್ತಪಡಿಸಿದರು. ದ. ಸಂ. ಸ. ಕೊರಳಿಗೆ ಕೊರಳು ಕೊಟ್ಟರು. ಅವತ್ತಿನ ಸಭೆಯಲ್ಲಿ ಮಾತನಾಡಿದ ಊರಿನ ಹಿರಿಯ ಮುಖಂಡ ಹೈಬತ್ತಿಯವರು 'ಮಲ ತಿನ್ನಿಸಿದ ಘಟನೆ'ಯನ್ನು ಮನನೊಂದು ಖಂಡಿಸಿದರು. ಆ ಮೂಲಕ ಹೆಂಡ, ಮಲ ಮೂತ್ರಾದಿ ದುರ್ನಾತದಲ್ಲಿ ಮುಳುಗಿ ಮುಚ್ಚಿ ಹೋಗಿರುವ ಜನತಾ ಸರ್ಕಾರದ ಕಣ್ಣು ಮೂಗೂ ತೆರೆಸಲು ಹೆಣಗಿದರು. ಕಣ್ಣು ತೆರೆಯಬಹುದಾದ ಎಲ್ಲರನ್ನೂ ಕಣ್ಣು ತೆರೆಯುವಂತೆ ಕೇಳಿಕೊಂಡಿದ್ದರು.

ಅಕ್ಟೋಬರ್ 31 ನವೆಂಬರ್ 1 ರಂದು ದಾವಣಗೆರೆಯಲ್ಲಿ ನಡೆದ ಎರಡು ದಿನಗಳ ದ. ಸಂ. ಸ ಕಾರ್ಯಕಾರಿ ಸಭೆಯಲ್ಲಿ ಈ ಕೆಳಕಂಡ ತೀರ್ಮಾನ ಕೈಗೊಂಡು ಸರ್ಕಾರವನ್ನು ಒತ್ತಾಯಿಸಲಾಯಿತು.

1. ಈ ಪ್ರಕರಣದಲ್ಲಿ ಭಾಗಿಯಾಗಿರುವವರನ್ನು ಗಡೀಪಾರು ಮಾಡಬೇಕು.

2. ಇವರಲ್ಲಿ ಐದು ಜನ ಸರ್ಕಾರಿ ನೌಕರರಿದ್ದು ಅವರನ್ನು ನೌಕರಿಯಿಂದ ವಜಾ ಮಾಡಬೇಕು.

3. ಇವರೆಲ್ಲರಿಗೂ ಪುಂಡಗಂದಾಯ ವಿಧಿಸುವುದರ ಜತೆಗೆ ಮತ ಹಾಕುವ ಹಕ್ಕನ್ನು ಹಿಂತೆಗೆದುಕೊಳ್ಳಬೇಕು.

ಹೇಲು ತುಂಬಿಕೊಂಡ ಹಿಂದೂ ಮನಸ್ಸೇ ನಿನ್ನಲ್ಲಿ ಹೆಣವಾಗದ್ದು. ಮನುಷ್ಯರನ್ನು ಮನುಷ್ಯರು ಅಂತನ್ನೋ ಅದೇನೋ ಮಾನವೀಯತೆ ಅನ್ನೋಹಳೆ ಎಕ್ಕಡ ಇದೆಯಂತಲ್ಲಾ ಅದಿದ್ದರೆ ಒಂದು ಬಾರಿ ಒಂದೇ ಒಂದು ಬಾರಿ ನಿನ್ನ ಮೊಕಕ್ಕೆ ನೀನೇ ನಿನ್ನ ಕೈಯಾರೆ ಹೊಡೆದುಕೋ ಆಗಲಾದರೂ.....

—ಕೆ ಎಚ್. ರಂಗಪ್ಪ.

# ಶರಣ ಬೊಮ್ಮಾಯಿಯವರ ಗರ್ರಂ ಹವಾ ಹಗರಣ

ಇತ್ತೀಚೆಗೆ ಹುಬ್ಬಳ್ಳಿಯಲ್ಲಿ ಅಂಬೇಡ್ಕರ್ ಪುತ್ಥಳಿಯ ಅನಾವರಣ ನಡೆಯಿತು. ಈ ಸಮಾರಂಭವನ್ನು ವ್ಯವಸ್ಥೆಗೊಳಿಸಿದ್ದು ಅಲ್ಲಿನ ವಿವಿಧ ದಲಿತ ಸಂಘಗಳು. ದ.ಸಂ.ಸ ಮೊದಮೊದಲು ಸಕ್ರಿಯವಾಗಿದ್ದು ಈ ಸಮಾರಂಭದ ಹಿನ್ನೆಲೆಯಲ್ಲಿ ನಡೆದ ಕ್ಷುದ್ರ ರಾಜಕೀಯಕ್ಕೆ ಬೇಸತ್ತು ದೂರ ಉಳಿಯಿತು. ಹಾಗಾಗಿ ಈ ಸಮಾರಂಭದ ಯಶಸ್ಸನ್ನು ತಮ್ಮ ರಾಜಕೀಯ ಬಂಡವಾಳ ಮಾಡಿಕೊಳ್ಳಲು ಅನೇಕರು ಮುಗಿಬಿದ್ದರು.

ಅಂದಿನ ಸಮಾರಂಭಕ್ಕೆ ಆಗಮಿಸಿದ್ದ ಮುಖ್ಯ ಅತಿಥಿಗಳು ಉತ್ತರ ಕರ್ನಾಟಕದ ಬಲಿಷ್ಠ ಲಿಂಗಾಯಿತ ಲಾಬಿಯ ಮುಖವಾಣಿಯಾದ ಶರಣ ಬೊಮ್ಮಾಯಿಯವರು. ಇವರ ಜನತಾ ಸರ್ಕಾರದ ಜಮಿನ್ದಾರೀ ನೀತಿಯ ಕಾರಣವಾಗಿಯೇ ಇತ್ತೀಚೆಗೆ ಈ ಭಾಗಗಳಲ್ಲಿ ದಲಿತರಿಗೆ ಸಾಮಾಜಿಕ ಬಹಿಷ್ಕಾರ, ದಲಿತರ ಮೇಲೆ ಹಲ್ಲೆ ಪ್ರಕರಣಗಳು ಹೆಚ್ಚಿರುವುದು. ಸರ್ಕಾರದ ಅಧಿಕಾರಯಂತ್ರ ಕಣ್ಣು, ಕಿವಿ ಮುಚ್ಚಿಕೊಂಡು ಸಮಾಧಿ ಸ್ಥಿತಿಯಲ್ಲಿರುವಂತೆ ನೋಡಿಕೊಳ್ಳುವುದಷ್ಟೇ ಈ ಶರಣ ಬೊಮ್ಮಾಯಿಯವರ ಕಾಯಕ. ಇಂಥ ಕಾಯಕ ಜೀವಿ ಬೊಮ್ಮಾಯಿಯವರು ಅಂದಿನ ವೇದಿಕೆಯ ಮೇಲೆ ತಮ್ಮ ಸರದಿ ಕಾಯುತ್ತಾ ಪಟ್‌ಸ್ಥಲಸ್ಥರಾಗಿದ್ದರು !

ಬೆಂಡಿಗೇರಿಯಲ್ಲಿ ದಲಿತರಿಗೆ ಮಲ ತಿನ್ನಿಸಿದ ಪ್ರಕರಣ ಎಲ್ಲರ ರಕ್ತದೊಳಗೂ ಕುದಿಯಾಡುತ್ತಿತ್ತು. ಅದರೊಳಗ ಬೆಳಗಾವಿಯ ಒಬ್ಬ ದ. ಸಂ. ಸ. ಕಾರ್ಯಕರ್ತ ಆ ಪ್ರಕರಣ ಪ್ರಸ್ತಾಪಿಸಬೇಕೆಂದಿದ್ದೂ ಸಹಜವೇ. ಭಾಷಣ ಮಾಡುತ್ತಿದ್ದವರು ಈ ಸಲಹೆ ಮನ್ನಿಸಿ ಈ ಪ್ರಕರಣವನ್ನು ಪ್ರಸ್ತಾಪಿಸಿ 'ದಲಿತರನ್ನು ರಕ್ಷಿಸಲು ಎಲ್ಲಾ ಸರ್ಕಾರಗಳೂ ಸೋತಿವೆ' ಎಂದರು.

ಈ ವಾಕ್ಯ ಇಲಿಯಾಗಿ ನೆಗೆದು, ಬೆಂಕಿಯಾಗಿ ಎದ್ದು, ಮಲವಾಗಿ ಹರಿದು ಮಾರ್ಜಾಲ ಶರಣ ಬೊಮ್ಮಾಯಿಯವರ ಮುಖಕ್ಕೆ ಸಿಡಿಯಿತು. ಆ ಕ್ಷಣವೇ ಅವರು ಕುರ್ಚಿಯಿಂದ ದಿಗ್ಗನೆದ್ದದ್ದು. ಎದ್ದು ಸಿಟ್ಟನಿಂದ—

'ಅಂತಾದ್ದನ್ನು ಹೇಳ್ತಾ ಹೋದ್ರೆ ದಿನಗಟ್ಟಲೆ ಹೇಳಬಹುದು. ಈಗ ಅದು ಮುಖ್ಯವಲ್ಲ. ಇಂದು ಈ ನಗರದಲ್ಲಿ ಅಂಬೇಡ್ಕರ್ ಪುತ್ಥಳಿಯ ಅನಾವರಣ ಮಾಡಿದ ಪುಣ್ಯ ದಿನ. ಅವರನ್ನು ಕುರಿತು ಚಿಂತಿಸೋಣ. ಬಿಹಾರ - ಉತ್ತರಪ್ರದೇಶಗಳಲ್ಲಿ ದಿನ ನಿತ್ಯವೂ ದಲಿತರನ್ನು ಕೊಲ್ಲುತ್ತಿದ್ದಾರೆ. ಅವನ್ನೆಲ್ಲ ಹೇಳಿಕೊಂಡರೆ ಬಹಳ ಇದೆ'

—ಎಂದು ಅರಚಿದರು.

ಆದರೆ ಆ ಪುಣ್ಯ ದಿನದಂದು ಮೊನ್ನೆಯಷ್ಟೇ ನಡೆದಿದ್ದ ಬೆಂಡಿಗೇರಿಯ ಮಲ ತಿನ್ನಿಸಿದ ಘಟನೆಯನ್ನು ಮರೆತು ಪಾಪಿಷ್ಟರಾಗಲು ಇಚ್ಛಿಸದ ದಲಿತರು "ನೀವು ಹೇಳಬೇಕಾದುದನ್ನು ನಿಮ್ಮ ಪಾಳಿ ಬಂದಾಗ ಹೇಳೂರಂತೆ ಈಗ ಕೂರ್ರಿ" ಎಂದು ಕೂರಲು ರೆಡಿ ಇರದ ಬೊಮ್ಮಾಯಿಯವರನ್ನು ಕೂರಿಸಿದರು. ತಮ್ಮ ಸರದಿ ಬಂದಾಗ ಬೊಮ್ಮಾಯಿಯವರು ಎಂ. ಎನ್. ರಾಯ್‌ಗೂ ಅಂಬೇಡ್ಕರ್‌ಗೂ, ಆ ಮೂಲಕ ತಮಗೂ ಅಂಬೇಡ್ಕರ್‌ಗೂ, ದಲಿತರಿಗೂ ಇರುವ ಅತೀ ಅಂದ್ರ ಅತಿಯಾದ ನಂಟಿನ ಗಂಟುಗಳನ್ನು ಬಿಚ್ಚಿದರು.

ಆದರೆ ತಮಗೂ ಮಲಕ್ಕೂ ಆ ಮೂಲಕ ಬಿಹಾರ, ಉತ್ತರಪ್ರದೇಶಕ್ಕೂ ಇರುವ ಸಂಬಂಧವನ್ನು ಮಾತ್ರ ಗುರುತಿಸಲು ನಿರಾಕರಿಸಿದರು. ಹೀಗೆ ಮಿದುಳೂ, ಮನಸ್ಸಿನೊಳಗೆ ಓವರ್ ಲೋಡಾಗಿರುವ ಮಲ ತುಂಬಿಕೊಂಡಿರುವುದರಿಂದಲೇ ತಮ್ಮ ಮೂಗಿನಡಿಯೇ ಮನುಷ್ಯರಿಗೆ ಮನುಷ್ಯರೇ ಬಲವಂತವಾಗಿ ಮಲತಿನ್ನಿಸಿದ್ದು ಕಂಡ ಕೂಡಲೆ ಬಿಹಾರ, ಉತ್ತರ ಪ್ರದೇಶದತ್ತ ಕೈ ತೋರಿಸುವುದು. ಅತ್ತ ಉತ್ತರ ಪ್ರದೇಶ, ಬಿಹಾರದ ಕಾಂಗ್ರೆ ಆಳರಸರು ದಲಿತರ ಬೆಂದ ದೇಹಗಳ ಮೇಲೆ ನಿಂತು 'ಅದೋ ನೋಡಿ ಅಲ್ಲೊಬ್ಬ ಮೌಲ್ಯಾಧಾರಿತ ಮುಖ್ಯಮಂತ್ರಿ ಅಲ್ಲಿ ಮನುಷ್ಯರಿಗೆ ಮಲತಿನ್ನಿಸುತ್ತಿದ್ದಾನೆ' ಎಂದು ಇತ್ತ ಕೈ ತೋರಿಸುವುದು. ಇದ್ಯಾವುದಕ್ಕೂ ಕೇರ್ ಮಾಡದ ಹೆಗಡೆಯ ವಂದಿಮಾಗಧ ಜನತಾ ಸರ್ಕಾರದ ಸಮಾಜವಾದಿ ಗುಂಪು ಮಾತ್ರ ತನ್ನ ಭಟ್ಟಂಗಿತನದ ಜತೆಗೆ ಹೆಗಡೆಯ ಮೈ ಮನಸ್ಸು ತುಂಬಿ ಹರಡುತ್ತಿರುವ ದುರ್ನಾತಕ್ಕೆ ಸೆಂಟು ಬಳಿಯುವಲ್ಲಿ ಬಿಜಿಯಾಗಿದ್ದಾರೆ.

●

# 'ಕಣ್ಣು ಹೋಗಿದ್ದರೂ ಅಡ್ಡಿಯಿಲ್ಲ'

### ಊರು

ನಮ್ಮೂರು ಬಗ್ಗಡವಾದ ಕೋಟೆ. ಕೋಟೆ ಅಲ್ಲಿಲ್ಲದಿದ್ದರೂ ಉಸಿರುಗಟ್ಟಿಸುವ ವಾತಾವರಣ ವಿದೆ.

ಇಲ್ಲಿ–ಘಟಪ್ರಭೆ ಹರಿಯುತ್ತಾಳೆ. ಆದರೆ ನದಿ ದಂಡೆಗಂಟಿರುವ ಸಾಲು ಪಾಯಿಖಾನೆಗಳ ಹೊಲಸನ್ನು ತೊಳೆಯಲು ಆಕೆಗೆ ನಿಃಶಕ್ತಿ.

ಇಲ್ಲಿ–ತಲೆಮಾರುಗಳಿಂದ ಶಿಥಿಲವಾದ ಮನೆಗಳಲ್ಲಿ ವಾಸಿಸುವ ಜನರಿದ್ದಾರೆ. ತೊಲೆಬೀಳುವ ಮುರುಕು ಮನೆಯ ದುರಸ್ತಿಯ ಕುರಿತು ಅವರೆಂದೂ ಚಿಂತಿಸುವುದಿಲ್ಲ. ಯಾಕೆಂದರೆ; ಇವರು ವಾಸಿಸುವ ಅಗ್ರಹಾರ 'ಕಿಲ್ಲೆ' ಆಲಮಟ್ಟಿ ಡ್ಯಾಂ ಪ್ರಾಜೆಕ್ಟ್‌ನಲ್ಲಿ ಮುಳುಗಿ ಹೋಗಲಿದೆ.

### ಜನ

ಮಧ್ಯಾನ್ಹವಾದರೆ ಇಕ್ಕಟ್ಟಾದ, ತಗ್ಗು–ದಿನ್ನೆಗಳಿಂದ ತುಂಬಿದ ಬೀದಿಗಳಿಗೆ ವಿಷಾದ ಕವಿದು ಬಿಕೋ ಎನ್ನುತ್ತಿರುತ್ತದೆ, ಊಟ ಮುಗಿಸಿದ ಮಡಿ ಹೆಂಗಸರು, ವೃದ್ಧ ಮುತ್ತೈದೆಯರು ಯಾರದೋ ಒಬ್ಬರ ಮನೆಯಲ್ಲಿ ಸೇರಿ, ನೀಲಾಂಜನದಲ್ಲಿ ಹಾಲನ್ನು ಹಾಕಿಕೊಂಡು, ಕಾಲನ್ನು ನೀಳವಾಗಿ ಚಾಚಿ, ಮನೆಬಿಟ್ಟು ದೂರದ ಮುಂಬಯಿ.ಪುಣೆ ಸೇರಿದ 'ಕ್ಷೇಮ'ದ ಪತ್ರ ಬರೆಯದ, ರಜೆಯಲ್ಲಿಯೂ ಮನೆಗೆ ಬಾರದ ಮಗನ ಕುರಿತು ಯೋಚಿಸುತ್ತ ನಿಟ್ಟುಸಿರಿಟ್ಟು ಹೂಬತ್ತಿ ಹೊಸೆಯುತ್ತಾರೆ. ಆಗಾಗ ದೇಸಾಯಿ, ಜೋಯಿಸ, ಕುಲಕರ್ಣಿಗಳ ಮನೆಗಳ ಅಂತರಂಗದ ವಿಷಯಗಳನ್ನೂ ಪಂಟು ಮಾಡುತ್ತಾರೆ.

ಇವರದು ಹಾಗಾದರೆ ಮನೆಯ ಯಜಮಾನ ಊಟದ ನಂತರ ಪಂಚಾಂಗವನ್ನೋ, ವೇದಗಳ ಪುಸ್ತಕವನ್ನೋ ತಿರುವಿ ಹಾಕಿದ್ದು ಬೇಸರವಾದರೆ ಸನ್ಮಾನದಲ್ಲಿ ಸಿಕ್ಕ ಶಾಲನ್ನು ಹೊದ್ದು ಗಾಢ ನಿದ್ದೆಗೆ ಸೇರುತ್ತಾರೆ.

ಇಂಥ ಇದೇ ಊರಲ್ಲಿ ಓದಿ–ಓದದೆ ನಿರುದ್ಯೋಗಿಗಳಾದ ಯುವಕರ ತಂಡವಿದೆ. ಮಧ್ಯಾನ್ಹ ಅವರಿಗೆಲ್ಲ ಶಾಪ. ಮನೆಯಲ್ಲಿದ್ದರೆ ಅಪ್ಪನ ಕೋಪ-ತಾಪ ಎದುರಿಸಬೇಕು. ಅದಕ್ಕೇ ನದಿ ದಂಡೆಗೋ, ಬಗೀಚಕ್ಕೋ ಕೆಟ್ಟ ಹಿಂದಿ ಚಿತ್ರಕ್ಕೋ ಹೋಗಿ ಸಿಗರೇಟು ಸುಟ್ಟು ಬರುತ್ತಾರೆ.

ಅವರಿಗೆ ಅವರ ವಿಫಲ ಪ್ರೇಮದ ಬಗ್ಗೆ, ತಂದೆ-ತಾಯಿಗಳ ಬಗ್ಗೆ ರೊಚ್ಚಿದೆ, ತಮ್ಮ ಬಗ್ಗೆ ತಮಗೇ ಕೀಳರಿಮೆ, ಹಳಹಳಿ ಇದೆ.

ಇದೇ ಗುಂಪಿಗೆ ಸೇರುವ ನನ್ನ ಸಂಬಧಿಕ ಅಣ್ಣಂದಿರಿದ್ದಾರೆ. ಆ ಓಣಿಯಲ್ಲಿ ಇವರದು ಅವರ ಸರೀಕರಲ್ಲಿ ವರ್ಚಸ್ಸಿದೆ.ಹಾಗೆಂದೇ ಅಲ್ಲಿನ ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ಇವರುಮುಂದಾಳು

ಇವರ ಪೈಕಿ ಒಬ್ಬನ ಕುರಿತು ಒಂದೆರಡು ಮಾತು ಹೇಳುವೆ.

### ಮನ

ಇವನಿಗೆ ಓದು ಹತ್ತಲಿಲ್ಲ, ಅಪ್ಪ ನಡೆಸುತ್ತಿದ್ದ ಹೋಟೆಲು ಕಾರಣಾಂತರದಿಂದ ಮುಚ್ಚಿ ಹೋಯಿತು, ಈಗ ಈತ ಹೆಚ್ಚೂ ಕಡಿಮೆ ನಿರುದ್ಯೋಗಿ,

---

**ಪಾಯಿಖಾನೆಯ ತೂಬಿನ ಕೆಳಗಿದ್ದ ಡಬ್ಬಿ ಎತ್ತಿದ. ಅಲ್ಲಿ ತಲೆಮಾರುಗಳ ಮಲ ತುಂಬಿತ್ತು. ಎತ್ತಿ ತಲೆ ಮೇಲಿಟ್ಟು ನಡೆದ ಭಾರಕ್ಕೆ ಹೆಜ್ಜೆಗಳು ಕುಸಿದವು. ತಲೆಯ ಮೇಲೆ ಮಲ ಸುರಿಯಿತು. 'ಇವರ' ಮಲ ಅವನ ದೇಹ ಮನಸ್ಸುಗಳನ್ನು ಆಕ್ರಮಿಸಿ ಪ್ರಜ್ಞೆ ತಪ್ಪಿಸಿತು.**

**ಆದರೆ 'ಇವರು' ?**

**—ಕ್ಷೇಮ**

---

ಸ್ವಲ್ಪ ಉಡಾಳ ಸ್ವಭಾವದವನಾದ್ದರಿಂದ ಅಲ್ಲಿನ ಚಂಡಾಲಚೌಕುಳಿಗೆ ಹಿರೇಮಣಿ. ಹೋಳಿ ಹುಣ್ಣಿಮೆ ಬಂತೆಂದರೆ ರಾತ್ರಿಯೆಲ್ಲ ಈತ ಪೈಪೋಟಿಯ ಮೇಲೆ ಹಲಗೆ (ತಪ್ಪಡಿ)ಯನ್ನು ಬಾರಿಸಬಲ್ಲ.ಗಣಪತಿ ಹಬ್ಬ ಬಂದರೆ ಈ ಓಣಿಯ ಪಟ್ಟಿ ವಸೂಲಿ ಮಾಡುವುದು ಸಹ ಇವನೇ.

ಈಗ ಎರಡು ವರ್ಷಗಳ ಹಿಂದಿರಬೇಕು. ಆ ಹೋಳಿ ಹುಣ್ಣಿಮೆಯಲ್ಲಿ ನಮ್ಮೂರಿನಲ್ಲಿ ಎಂದೂ ಇಲ್ಲದ ಕೋಮುಗಲಭೆಯಾಯಿತು. ಅದರಲ್ಲಿ ನನ್ನೀ ಸಂಬಂಧಿಗಳೂ ಇದ್ದರು. ಇವರಲ್ಲಿ ಒಬ್ಬನಿಗೆ ತಲೆಗೆ ಭಾರೀ ಪೆಟ್ಟಾಗಿ ಹೊಲಿಗೆ ಹಾಕಿಸಿಕೊಳ್ಳಬೇಕಾಗಿ ಬಂತು. ಈಗ ಹೋಳೀ ಬಂದರೆ ಇವರ್‍ಯಾರು ಊರಲ್ಲಿರಬಾರದು ಆ ರೀತಿ ಪೊಲೀಸರ ಬಳಿ ಕರಾರಾಗಿದೆ.

ಕಳೆದ ತಿಂಗಳು ರಿಲಯನ್ಸ್ ಕಪ್ ನಡೆದಾಗಿನ ಒಂದು ಘಟನೆ ಹೀಗಿದೆ. - ಆಸ್ಟ್ರೇಲಿಯಾ-ಪಾಕಿಸ್ತಾನ'ಗಳ ಒಂದು ದಿನದ ಸರಣಿಯಿತ್ತು, ಆವರೆಗೆ ಪಾಕಿಸ್ತಾನ ಮುಂಚೂಣಿಯಲ್ಲಿದ್ದಿದ್ದು ಆ ದಿನ ಇದ್ದಕ್ಕಿದ್ದಂತೆ ಸೋತುಬಿಟ್ಟಿತು, ಆಗ ಈ ನನ್ನ ಸಂಬಂಧಿಗಳು ಮಾಡಿದ್ದೇನು ಗೊತ್ತೆ ? ಆಗಿಂದಾಗಲೇ ಅಂಗಡಿಯಿಂದ ನೂರಾರು ರೂಪಾಯಿ ಪಟಾಕಿ ತಂದರು. ಸುಟ್ಟರು. ಆ ದಿನವೂ ಕೋಮುಗಲಭೆ ಸ್ವಲ್ಪದರಲ್ಲಿ ತಪ್ಪಿ ಹೋಯಿತು. ಆದರೆ 'ಪಾಪಕ್ಕೆ ಶಿಕ್ಷೆ' ಎನ್ನುತ್ತಾರಲ್ಲಾ ಹಾಗೆ ಮೇಲೆ ಹೇಳಿದ ಅಣ್ಣನಿಗೆ ಪಟಾಕಿ ಹಚ್ಚುವಾಗ ಅದು ಕಣ್ಣಿಗೆ ಸಿಡಿದು ಈತ ಅಸ್ಪತ್ರೆಗೆ ಹೋಗಬೇಕಾಯಿತು. ಈಗ ಇವನ ಕಣ್ಣಿನ ಸುತ್ತ ಹೊಲಿಗೆಗಳಿವೆ. ಆ ಬಗ್ಗೆ ಅವನಿಗೇನೊ ನೋವಿಲ್ಲ. ಹೇಳುತ್ತಾನೆ–'ನನ್ನ ಕಣ್ಣು ಹೋಗಿದ್ದರೂ ಅಡ್ಡಿಯಿಲ್ಲ.ಪಾಕಿಸ್ತಾನ ಗೆಲ್ಲಲಿಲ್ಲವಲ್ಲ ಅಷ್ಟು ಸಾಕು!'

ಇದೇ ಅಣ್ಣನ ಮನಸ್ಸಿನಾಳದ ಇನ್ನೊಂದು ಸಾಧ್ಯತೆ ಹೇಳಿ ಬರಹ ಮುಗಿಸುವೆ. ನಮ್ಮೂರಿಗೆ ಬೇರೆಡೆಯಲ್ಲಿಲ್ಲ ನಾಗರಿಕತೆ, ಆಧುನಿಕತೆ ಬಂದಿದ್ದರು ಕಿಲ್ಲೆಯಲ್ಲಿ ಮಾತ್ರ ಇನ್ನೂ ಶಿಲಾಯುಗ.

ಇಲ್ಲಿ- ನೂರುವರ್ಷಗಳ ಹಿಂದೆ ಪಾಯಿಖಾನೆಗಳ ವ್ಯವಸ್ಥೆ ಹೇಗಿತ್ತೋ ಈಗಲೂ ಹಾಗೆಯೇ ಇದೆ, ಎತ್ತರದ ಮಾಡು, ಅದರ ಮೇಲೊಂದು ದೊಡ್ಡ ತೂಬು-ಕೆಳಗಡೆ ಒಂದು ದೊಡ್ಡ ಡಬ್ಬಿ ಇದನ್ನು ಪ್ರತಿದಿನ ಜಾಡಮಾಲಿಗಳು ಸ್ವಚ್ಛ ಮಾಡಿಟ್ಟು ಹೋಗುತ್ತಾರೆ.

ಕೆಲವು ದಿನಗಳ ಹಿಂದೆ ಊರಲ್ಲಿ ಮೂರನೆಯ ದರ್ಜೆ ಪೌರಕಾರ್ಮಿಕರ ಮುಷ್ಕರ ನಡೆಯಿತು, ಒಂದು ವಾರವಾದರೂ ಮುಷ್ಕರ ನಿಲ್ಲಲಿಲ್ಲ. ಪಾಯಿಖಾನೆಯ ತೂಬು ತುಂಬಿ ತುಳುಕಿದವು. ಗಂಡಸರೇನೋ ಬಯಲಿಗೆ ಹೋಗಬಹುದು. ಹೆಂಗಸರು ? ಕಿಲ್ಲೆಯಲ್ಲೆಲ್ಲ ಈ ಹೊಲಸು(!) ವಾಸನೆ ಸುತ್ತತೊಡಗಿ ಹೊರಗೆ ಕಾಲಿಡುವುದೇ ತ್ರಾಸವಾಯಿತು. ಕಡೆಗೂ ಮುಷ್ಕರ ನಿಂತಾಗ. ನಿಟ್ಟುಸಿರಿಟ್ಟದ್ದು ಕಾರ್ಮಿಕರಲ್ಲ, ಅಗ್ರಹಾರದ ಜನ

ಮುಷ್ಕರ ಮುಗಿದ ಮಧ್ಯಾಹ್ನ ಕಾರ್ಮಿಕರೆಲ್ಲ ಕೆಲಸಕ್ಕೆ ಹಾಜರಾದರು, ಇವರ ಮನೆಗೂ ಹದಿನೈದುವರ್ಷಗಳ ಕನಸುಗಳು ಕಣ್ಣಲ್ಲಿ ತುಂಬಿರಬಹುದಾದ, ಕಪ್ಪು ಹುಡುಗನೊಬ್ಬ ಬಂದ. ಈ ಹಿಂದಿನಂತೆ ಪಾಯಿಖಾನೆ ಸ್ವಚ್ಛಮಾಡಲು ನಡೆದ. ತೂಬಿನ ಕೆಳಗಡೆಗಿದ್ದ ಡಬ್ಬಿ ಎತ್ತಿದ: ಆದರೆ ತಲೆಮಾರುಗಳ ಮಲ ತುಂಬಿದ ಡಬ್ಬಿ ಭಾರವಾಗಿ ಅಲುಗಲಿಲ್ಲ. ಕಡೆಗೂ ಬಹಳ ತ್ರಾಸ

(11ನೇ ಪುಟಕ್ಕೆ)

ಎರಡು ಉಪನ್ಯಾಸಗಳು

# ಭಾರತದ ಧಾರ್ಮಿಕ ದಾರಿದ್ರ್ಯ

ಮೂಲ: ವಿ. ಆರ್. ನಾರ್ಲ
ಅನು: ಗಂಗಾಧರಮೂರ್ತಿ

## ಆಧುನಿಕ ಕಾಲ

## 8

ಋಗ್ವೇದ ಕುರಿತಾದ ಅರವಿಂದರ ಮಾತುಗಳನ್ನು ಗಮನಿಸಿದರೆ ಅವರ ನಿಲುವು ಆಶ್ಚರ್ಯವನ್ನುಂಟುಮಾಡುವುದಿಲ್ಲ. ಅದು ಸಂಕೇತಗಳಿಗೇ ಏಕೆ ಜೋತುಬಿತ್ತು ? ಜಾತಿವ್ಯವಸ್ಥೆಯಲ್ಲಿನ ಕೆಳಹಂತದಲ್ಲಿರುವವರೂ ಇವುಗಳಲ್ಲಿರುವ ಸತ್ಯಗಳನ್ನು ತಿಳಿದುಕೊಂಡು ದುರುಪಯೋಗಪಡಿಸಿಕೊಳ್ಳುತ್ತಾರೆ ಎನ್ನುವ ಕಾರಣದಿಂದ ಅದು ಅವರನ್ನು ಈ ಕೃತಿಗಳ ಬಳಿಗೆ ಬಾರದ ಹಾಗೆ ತಡೆಯುವ ಪ್ರಯತ್ನವೇ ? ಅರವಿಂದರ ಪ್ರಕಾರ ಸೂರ್ಯನು ಬುದ್ಧಿಯ ಸಂಕೇತವಾದರೆ ಅಗ್ನಿಯು ಮನಸ್ಸನ್ನೂ ಸೋಮನು ಭಾವನೆಗಳನ್ನೂ ಸೂಚಿಸುತ್ತಾರೆ ಇತ್ಯಾದಿ. ಉರಿಯುವ, ಕಣ್ಣು ಕೋರೈಸುವಂಥ ಬೆಳಕಿನ, ಆಸ್ಫೋಟಗೊಳ್ಳುವ, ಅಪರಿಮಿತವೇಗದಲ್ಲಿ ತನ್ನ ಶಕ್ತಿಯನ್ನು ವಿಶಾಲ ಆಕಾಶದಲ್ಲೆಲ್ಲಾ ಪ್ರಸರಿಸುತ್ತಾ ತನ್ನ ತೂಕವನ್ನು ಕಳೆದುಕೊಳ್ಳುತ್ತಿರುವ ಸೂರ್ಯನು ಬುದ್ಧಿಯನ್ನೇ ಏಕೆ ಸಂಕೇತಿಸಬೇಕು ? ಸಾವಿನ ಬಯಕೆಯನ್ನು ಏಕೆ ಸಂಕೇತಿಸಬಾರದು ? ನಿಗೂಢ ಮನಸ್ಸು ಮಾತ್ರ ಗ್ರಹಿಸಬಲ್ಲಂಥ ಸಂಗತಿ ಇದಾಗಿರಬಹುದೇನೋ !

ದಯಾನಂದರ ಆರ್ಯಧರ್ಮದಲ್ಲಿ ಅಸಹನೆಯ ಪ್ರಬಲ ಅಂಶಗಳು ಕಂಡುಬರುತ್ತವೆ. ಋಗ್ವೇದದಲ್ಲಿ ಕಂಡುಬರುವ ಅಸಹನೆಯ ಪ್ರತಿಧ್ವನಿ ಇದು ಎಂದು ಹೇಳಬಹುದು. ಅನಾರ್ಯರನ್ನು ಅದು ದಾಸರು ಮತ್ತು ದಸ್ಯುಗಳು (ಗುಲಾಮರು ಮತ್ತು ಕಳ್ಳರು) ಎಂದೂ ಅವರನ್ನು ಶಿಶ್ನಾರಾಧಕರೆಂದೂ ಅವಹೇಳನ ಮಾಡುವುದನ್ನೂ, ಅವರನ್ನು ಮೂಗಿಲ್ಲದವರೆಂದು ಅಪಹಾಸ್ಯ ಮಾಡುವುದಲ್ಲದೆ ಅವರ ಭಾಷೆಯು ಕರ್ಣಕಠೋರವಾದ್ದೆಂದು ಹೀಯಾಳಿಸುವುದನ್ನೂ ಕಾಣಬಹುದು. ಅವರ ಬಗ್ಗೆ ಒಂದು ಒಳ್ಳೆಯ ಮಾತನ್ನೂ ಆಡುವುದಿಲ್ಲ. ದಯಾನಂದ ಮತ್ತು ಅವರ ಅನುಯಾಯಿಗಳು ಇಸ್ಲಾಂ ಮತ್ತು ಕ್ರೈಸ್ತ ಧರ್ಮಗಳ ಬಗ್ಗೆ ಮಾಡಿದ ಟೀಕೆಗಳು ಇದಕ್ಕಿಂತ ಯಾವುದೇ ರೀತಿಯಲ್ಲೂ ಕಡಿಮೆ ನಿಂದಾತ್ಮಕವಾಗಿಲ್ಲ.

ಬ್ರಹ್ಮಸಮಾಜದಂತೆ ಆರ್ಯ ಸಮಾಜವೂ ಕೂಡ ತನ್ನ ನಿಯಮಗಳಲ್ಲಿದ್ದ ವೈಚಾರಿಕ ಮತ್ತು ಪ್ರಗತಿಪರ ಅಂಶಗಳಿಂದ ಹಾಗೂ ಕಾರ್ಯಕ್ರಮಗಳಿಂದ ನಮ್ಮನ್ನು ನಿಜಕ್ಕೂ ಒಂದು ಹೆಜ್ಜೆ ಮುಂದಕ್ಕೆ ಕರೆದೊಯ್ದಿದೆ. ಅದರ ಪ್ರಭಾವವು ಪಂಜಾಬ್ ಮತ್ತು ಉತ್ತರ ಪ್ರದೇಶಗಳಲ್ಲಿ ಅತ್ಯಂತ ಪ್ರಬಲವಾಗಿ ಮತ್ತು ರಾಜಸ್ಥಾನದಲ್ಲಿ ಸ್ವಲ್ಪ ಮಟ್ಟಿಗೆ ಕಾಣಸಿಗುವುದು. ಆದರೆ ಎಲ್ಲ ಸುಧಾರಿತ ಧರ್ಮಗಳು ಮತ್ತು ಧಾರ್ಮಿಕ ಪಂಥಗಳಂತೆಯೇ ಅದು ನಮ್ಮನ್ನು ಒಂದು ಹೆಜ್ಜೆ ಮುಂದಕ್ಕೆ ಒಯ್ದಂತೆಲ್ಲಾ ಎರಡು ಹೆಜ್ಜೆ ಹಿಂದಕ್ಕೆಳೆದಿದೆ.

ಥಿಯೋಸಫಿಕಲ್ ಸಮಾಜವು ಇವೆಲ್ಲವುಗಳಿಗಿಂತ ಹೆಚ್ಚಾದ ಹಾನಿಯನ್ನೇ ಮಾಡಿತೆನ್ನಬೇಕು. ಅದು ನಮ್ಮನ್ನು ಒಂದು ಹೆಜ್ಜೆಯೂ ಮುಂದಕ್ಕೆ ಕೊಂಡುಹೋಗದೆ ಹಲವಾರು ಹೆಜ್ಜೆಗಳು ಹಿಂದಕ್ಕೆ ತೆಗೆದುಕೊಂಡು ಹೋಯಿತು. ಈ ಮಾತನ್ನು ನಾನು ಬೇಜವಾಬ್ದಾರಿಯಿಂದ ಹೇಳುತ್ತಿಲ್ಲ. ನಾವೀಗಾಗಲೇ ನೋಡಿದಂತೆ ಬ್ರಹ್ಮಸಮಾಜವು ಉಪನಿಷತ್ತುಗಳನ್ನು ಮಾತ್ರ ಅಧಿಕೃತ ಗ್ರಂಥಗಳೆಂದು ಸ್ವೀಕರಿಸಿ ಮಿಕ್ಕವನ್ನು ನಿರಾಕರಿಸಿತು. ಅಷ್ಟೇ ಅಲ್ಲದೆ ಅದು ಯಾವುದೇ ಉಪನಿಷತ್ತನ್ನು ಅಥವಾ ಉಪನಿಷತ್ತುಗಳ ಸಮುದಾಯವನ್ನು ಸಮಗ್ರವೆಂದು ಒಪ್ಪಿಕೊಳ್ಳಲಿಲ್ಲ. ವಿವಿಧ ಉಪನಿಷತ್ತುಗಳ ಭಾಗಗಳನ್ನು [illegible]ಮು ಆಯ್ಕೆ ಮಾಡಿತು. ಹಾಗೆ ಮಾಡುವಾಗ ದೇವೇಂದ್ರನಾಥ ಟಾಗೋರರು ತಮ್ಮ ಆತ್ಮಚರಿತ್ರೆಯಲ್ಲಿ ಹೇಳುವಂತೆ ಥಿಯೋಸಫಿಸ್ಟರು ತಮ್ಮ ಅಂತಃದೃಷ್ಟಿಯನ್ನು ಅವಲಂಬಿಸಿದರು. ಆರ್ಯ ಸಮಾಜವು ವೇದಗಳು ಮಾತ್ರವಲ್ಲದೆ ಬೇರಾವುವೂ ದೈವಿಕ ಗ್ರಂಥಗಳಲ್ಲ ಎಂದು ಅವಜ್ಞೆ ತಾಳಿತು. ಆದರೆ ಥಿಯೋಸಫಿಕಲ್ ಸಮಾಜವು ಅಕ್ಷರಶಃ ಇಡೀ ಹಿಂದೂಧಾರ್ಮಿಕ ಸಾಹಿತ್ಯವನ್ನು ಪವಿತ್ರವೆಂದು ಅಂಗೀಕರಿಸಿತು. ಅಷ್ಟರಿಂದಲೇ ತೃಪ್ತವಾಗದೆ ತಮ್ಮ ಮಾನಸಿಕ ಶಕ್ತಿಯಿಂದ ಮಾನವಕುಲವನ್ನು ಮುನ್ನಡೆಸಬಲ್ಲ ಮಹಾತ್ಮರು ಹಿಮಾಲಯದ ಅಗೋಚರ ಜಗತ್ತಿನಲ್ಲಿದ್ದಾರೆ ಎಂದೂ ಅದು ಹೇಳತೊಡಗಿತು. ಇಂತಹ ಮಹಾತ್ಮರೊಂದಿಗೆ ಮಾನಸಿಕವಾಗಿಯೂ ದೈಹಿಕವಾಗಿಯೂ ತನಗೆ ಸಂಪರ್ಕವಿದೆ ಎಂದು ಸಮಾಜದ ಸಂಸ್ಥಾಪಕಳಾದ ಮೇಡಂ ಬ್ಲಾವಟಸ್ಕಿ ಹೇಳಿಕೊಂಡಳು. ಇದೆಲ್ಲವೂ ಪೊಳ್ಳೆಂದು ತಳ್ಳಿಹಾಕದೆ ವಿದ್ಯಾವಂತರಾದ ಭಾರತೀಯರು ಅದರಲ್ಲೂ ಹಿಂದೂಗಳು ಸಾವಿರಾರು ಸಂಖ್ಯೆಯಲ್ಲಿ ಥಿಯೋಸಫಿಕಲ್ ಸಮಾಜದ ಸದಸ್ಯರಾಗಲು ಏಕೆ ನುಗ್ಗುತ್ತಿದ್ದರು ?

ಆರ್. ಸಿ. ಮಜುಂದಾರ್ ಅವರಿಗೂ ನನಗೂ ಸಾಮಾನ್ಯವಾಗಿ ಏಕಾಭಿಪ್ರಾಯವಿರುವುದಿಲ್ಲ. ಆದರೆ ಮೇಡಂ ಬ್ಲಾವಟಸ್ಕಿ ಹಾಗೂ ಅನಂತರ ಅನಿಬೆಸೆಂಟ್ ಅವರುಗಳ ನೇತೃತ್ವದಲ್ಲಿ ಥಿಯೋಸಫಿಕಲ್ ಸಮಾಜವು ಅಗಾಧ ಜನಪ್ರಿಯತೆಯನ್ನು ಗಳಿಸಲು ಇರುವ ಕಾರಣಗಳನ್ನು ಕುರಿತು ತೀಕ್ಷ್ಣ ವಿವೇಚನೆಯ ಸೂಕ್ತ ವಿಶ್ಲೇಷಣೆಯನ್ನು ಅವರು ಕೊಟ್ಟಿದ್ದಾರೆ : "ಥಿಯೋಸಫಿಯನ್ನು ಸ್ವಾಗತಿಸಲು ಇಂಗ್ಲಿಷ್ ವಿದ್ಯಾಭ್ಯಾಸ ಪಡೆದ ವರ್ಗಗಳಿಗೆ ಒಂದು ಪ್ರಮುಖ ಕಾರಣವಿತ್ತು. ಇವರಲ್ಲಿ ಅನೇಕರಿಗೆ ಆಗಿನ ಧಾರ್ಮಿಕ ಮತ್ತು ಸಾಮಾಜಿಕ ತತ್ವಗಳು, ಆಚರಣೆಗಳು ಮತ್ತು ಸಂಪ್ರದಾಯಗಳ ಬಗ್ಗೆ ನಂಬಿಕೆ ಇರಲಿಲ್ಲ. ಬಹಿಷ್ಕಾರ ಮತ್ತು ಅದರ ಪರಿಣಾಮವಾಗಿ ಉದ್ಭವಿಸುವ ಹಲವು ಗಂಭೀರ ಸ್ವರೂಪದ ಸಮಸ್ಯೆಗಳಿಗೆ ಹೆದರಿ ಅವರು ಅವುಗಳನ್ನು ಬಹಿರಂಗವಾಗಿ ಟೀಕಿಸುವುದು ಸಾಧ್ಯವಿರಲಿಲ್ಲ.

**ಋಗ್ವೇದದಂತೆ, ದಯಾನಂದರ ಆರ್ಯ ಧರ್ಮದಲ್ಲೂ ಅನಾರ್ಯರನ್ನು ದಾಸರು ಮತ್ತು ದಸ್ಯುಗಳು (ಗುಲಾಮರು ಮತ್ತು ಕಳ್ಳರು) ಎಂದೂ ಮೂಗಿಲ್ಲದವರೆಂದೂ ಅಪಹಾಸ್ಯ ಮಾಡಲಾಗಿದೆ. ಜತೆಗೆ ಅವರ ಭಾಷೆಯನ್ನೂ ಕರ್ಣಕಠೋರ ಎಂದು ಹೀಯಾಳಿಸಲಾಗಿದೆ.**

'ಬೌದ್ಧಿಕ ಮತ್ತು ನೈತಿಕ ಸಂಘರ್ಷದ ಕ್ಲೇಶಮಯ ಬದುಕಿಗೆ ತಳ್ಳಲ್ಪಟ್ಟ' ಇವರು ಥಿಯೋಸಫಿಯಲ್ಲಿ 'ಸತ್ಯ ಸ್ವರೂಪದ, ಶಾಂತಿಯ ಮತ್ತು ಮುಕ್ತಿಯ ದೈವವಾಣಿಯನ್ನು' ಕಂಡುಕೊಂಡರು. ಏಕೆಂದರೆ ಮನುಷ್ಯನ ಉನ್ನತಿಯು ಹಂತಹಂತವಾಗಿರುತ್ತದೆ ಎನ್ನುವ ಮಾರ್ಮಿಕ ಸಿದ್ಧಾಂತಗಳಿಂದ ಅದು ಹಿಂದೂಧರ್ಮದ ಸಾಂಪ್ರದಾಯಿಕ ಆಚರಣೆಯನ್ನು ಸಮರ್ಥಿಸಿತು. ವಿಶ್ವಭ್ರಾತೃತ್ವದ ಆದರ್ಶ ಜಾತಿಪದ್ಧತಿ, ಏಕದೇವತೋಪಾಸನೆ ಮತ್ತು ಹಿಂದೂ ದೇವಗಣಕ್ಕೆ ಇತ್ತೀಚೆಗೆ ಸೇರಿಕೊಂಡ ದೇವತೆಗಳೂ ಸೇರಿದಂತೆ ಅಸಂಖ್ಯ ದೇವ ದೇವತೆಗಳ ಆರಾಧನೆ—ಇವುಗಳಲ್ಲಿ ಹೊಂದಾಣಿಕೆಯನ್ನು ತರಲು ಅದು ಯತ್ನಿಸಿತು. ಅಷ್ಟೇ ಅಲ್ಲದೆ ಮೂರ್ತಿಪೂಜೆಯಂತಹ ಆಚರಣೆಗಳು ಕೂಡ ಮಾನಸಿಕ ಶಕ್ತಿಯನ್ನು ಬಲಗೊಳಿಸುವಂತಹವು ಎನ್ನುವ ನಿಲುವನ್ನು ತಳೆಯಿತು. ಈ ಮಾರ್ಗಗಳಿಂದ ಥಿಯೋಸಫಿಯು ಭೌತಿಕ ಅರ್ಥದಲ್ಲಿ ವಿದ್ಯಾವಂತ ಭಾರತೀಯರ ಮನಸ್ಸಿನಲ್ಲಿದ್ದ 'ಕೀಳರಿಮೆ'ಯನ್ನು ಹೋಗಲಾಡಿಸಲು ಪ್ರಯತ್ನಿಸಿತು."—12

ಮಜುಂದಾರ್ ಹೇಳುವ 'ಕೀಳರಿಮೆಯನ್ನು ತೊಡೆದುಹಾಕುವುದು' ಎಷ್ಟರಮಟ್ಟಿಗೆ ಸಂಗತ ಎನ್ನುವುದು ನನಗೆ ಗೊತ್ತಿಲ್ಲ. ಆದರೆ ಎಲ್ಲ ರೀತಿಯ ಅರ್ಥಹೀನ ಸಂಪ್ರದಾಯಗಳಿಗೂ, ಹೀನ ಆಚರಣೆಗಳಿಗೂ, ಪೊಳ್ಳು ನಂಬಿಕೆಗಳಿಗೂ ಕೃತ್ರಿಮ ವೈಜ್ಞಾನಿಕ ಸಮರ್ಥನೆಯನ್ನು ನೀಡುವುದರ ಮೂಲಕ ಥಿಯೋಸಫಿಯು ಅಗಾಧ ಹಾನಿಯನ್ನುಂಟು ಮಾಡಿತು ಎನ್ನಬಹುದು. ಈ ಸಮಾಜದ ಚಟುವಟಿಕೆ ಈಗ ಅಷ್ಟೇನು ಕಂಡು ಬರದಿದ್ದರೂ ನನ್ನ ಅಭಿಪ್ರಾಯದಂತೆ, ಈಗ ನಾವು ಕಾಣುತ್ತಿರುವ ಬಾಲಯೋಗಿಗಳ, ಭಗವಾನರ, ಮಾತೆಯರ ಮತ್ತು ಅವತಾರ ಪುರುಷರ ಹಣಬೆ ರೀತಿಯ ಬೆಳವಣಿಗೆಗೆ ಈ ಸಮಾಜವು ಸೃಷ್ಟಿಸಿದ ವಾತಾವರಣವೇ ಕಾರಣ ಎನ್ನಬಹುದು.

ಈಗ ನಾವು ರಾಮಕೃಷ್ಣ ಪರಮಹಂಸ ಮತ್ತು ವಿವೇಕಾನಂದರನ್ನು ಕುರಿತು ಯೋಚಿಸಬಹುದು. ತಮ್ಮ ಕಾಲದಲ್ಲಷ್ಟೇ ಅಲ್ಲದೆ ಈಗಲೂ ಸಹ ಈ ಗುರು–ಶಿಷ್ಯರ ಪ್ರಭಾವವನ್ನು ಕಾಣಬಹುದು. ವೇದಾಂತಿಗಳಾಗಿದ್ದುದರ ಜೊತೆಗೆ ಅವರು ಮೂರ್ತಿ ಪೂಜಕರೂ ಆಗಿದ್ದರು. ಈ ವಿಷಯದಲ್ಲಿ ಅವರು ಆದಿಶಂಕರಾಚಾರ್ಯರನ್ನು ಅನುಕರಿಸಿದಂತೆ ತೋರುತ್ತದೆ. ಶಂಕರಾಚಾರ್ಯರು ಸಮಾಧಿಸ್ಥರಾಗುತ್ತಿದ್ದರೋ ಇಲ್ಲವೋ ಗೊತ್ತಿಲ್ಲ. ಆದರೆ ಈ ಇಬ್ಬರು ಆಗಾಗ್ಗೆ ಸಮಾಧಿಸ್ಥರಾಗುತ್ತಿದ್ದರು. ರಾಮಕೃಷ್ಣ ಹಾಗೂ ವಿವೇಕಾನಂದರನ್ನು ಕುರಿತ ಇತ್ತೀಚಿನ ವಿಚಾರ ಪ್ರಚೋದಕ ಕೃತಿಯಾದ ವೇದಾಂತ ಮತ್ತು ಬಂಗಾಳದ ಪುನರುಜ್ಜೀವನದ ಲೇಖಕ ನಿರಂಜನ್ ಧರ್ ಅವರು ಈ ಗುರುಶಿಷ್ಯರ ಬಗ್ಗೆ ಇದುವರೆಗೆ ಗೊತ್ತಿರದ ಹಲವು ವಿಷಯಗಳನ್ನು ಬೆಳಕಿಗೆ ತಂದಿದ್ದಾರೆ. ಇದು ಎಲ್ಲರ ಗಮನಕ್ಕೂ ಬರಬೇಕು ಎಂಬುದು ನನ್ನ ಇಚ್ಛೆ. "ಧಾರ್ಮಿಕ ವ್ಯಕ್ತಿಯ 'ಉನ್ನತ' ಮಾನಸಿಕ ಸ್ಥಿತಿಗಳು ಭಾವೋದ್ವೇಗ ಮತ್ತು ವಶೀಕರಣದ ದಾಳಿಗೆ ಒಳಗಾದ ನರರೋಗಿಯ (Neurotic) ಮಾನಸಿಕ ಸ್ಥಿತಿಗಳನ್ನೂ ಹೋಲುತ್ತವೆ"[13] ಎನ್ನುವ ವೈಜ್ಞಾನಿಕ ವಿಶ್ಲೇಷಣೆಯನ್ನು ಕಾಣುತ್ತೇವೆ.

---

**ಥಿಯೊಸಫಿಕಲ್ ಸಮಾಜವು ಅರ್ಥಹೀನ ಸಂಪ್ರದಾಯಗಳಿಗೂ, ಹೀನ ಆಚರಣೆಗಳಿಗೂ, ಪೊಳ್ಳು ನಂಬಿಕೆಗಳಿಗೂ ಕೃತ್ರಿಮ ವೈಜ್ಞಾನಿಕ ಸಮರ್ಥನೆ ನೀಡುವುದರ ಮೂಲಕ ಅಗಾಧ ಹಾನಿಯನ್ನುಂಟು**

---

ಧರ್ ಅವರೇ ಹೇಳುವಂತೆ "ರಾಮಕೃಷ್ಣರು ತಮ್ಮಷ್ಟಕ್ಕೆ ಪ್ರಾಮಾಣಿಕರೂ ಗಂಭೀರ ವ್ಯಕ್ತಿತ್ವವುಳ್ಳವರೂ ಆಗಿದ್ದುದು ಸಂಶಯಾತೀತ", ಆದರೆ ಸಾಮಾನ್ಯವಾಗಿ ಕಂಡುಬರುವಂತೆ ಅವರನ್ನು ಸುತ್ತುವರೆದ ಅಪ್ರಮಾಣಿಕರು ತಮ್ಮ ಸ್ವಾರ್ಥ ಸಾಧನೆಗಾಗಿ ಅವರನ್ನು ಅವತಾರ ಗೊಳಿಸಿದರು.

ರಾಮಕೃಷ್ಣರಂತೆ ವಿವೇಕಾನಂದರ ವ್ಯಕ್ತಿತ್ವ ಕೂಡ ಹೆಚ್ಚು ಗೊಂದಲಮಯ. ಸನ್ಯಾಸಿಯಾದರೂ ತಮ್ಮ ಸಂಸಾರ ಬಂಧನಗಳನ್ನು ಸಂಪೂರ್ಣವಾಗಿ ತೊರೆಯುವುದಾಗಲಿ, ತಾಯಿ ಮತ್ತು ಸಹೋದರರಿಗೆ ಸುಖಕರ ಜೀವನವನ್ನು ಒದಗಿಸುವ ಬಗ್ಗೆ ಯೋಚಿಸುವುದನ್ನಾಗಲೀ ಅವರು ನಿವಾರಿಸಿಕೊಳ್ಳಲಿಲ್ಲ. ಸನ್ಯಾಸಿಯಾದರೂ ಆಧ್ಯಾತ್ಮಿಕ ಭಾರತದ ಸಂದೇಶವನ್ನು ಹೊತ್ತು ಭೌತವಾದೀ ಪಶ್ಚಿಮವನ್ನು ರಕ್ಷಿಸಲು "ಹಿಂದೂ ನೆಪೋಲಿಯನ್" ಪಾತ್ರ ವಹಿಸಿ ಆಧ್ಯಾತ್ಮಿಕ ದಿಗ್ವಿಜಯವನ್ನು ಸಾರಲು ಅಪೇಕ್ಷಿಸಿದರು. ಭಾರತದ ವೇದಾಂತದಿಂದ ಆರಿಸಿ ಪೋಣಿಸಿದ ಆಧ್ಯಾತ್ಮಿಕ ಸತ್ಯದ ಸಂದೇಶವನ್ನರಿಯಲು ಅವರ ಸಮ್ಮೋಹಕ ಭಾಷಣಗಳಿಗೆ ತುಂಬುತ್ತಿದ್ದ ಅಮೆರಿಕಾ ಮತ್ತು ಯೂರೋಪ್ ಪ್ರೇಕ್ಷಾಗೃಹಗಳಿದ್ದರೂ, 'ಭೌತವಾದೀ ಪಶ್ಚಿಮ'ವನ್ನು ರಕ್ಷಿಸುವುದು ಅವರಿಗೆ ಸಾಧ್ಯವಾಗಲಿಲ್ಲ ಎನ್ನುವುದು ನಮ್ಮೆಲ್ಲರಿಗೂ ಗೊತ್ತಿರುವ ವಿಷಯ. ಆದರೆ ಅವರಿಂದ ಈ ದೇಶಕ್ಕೆ ಒಂದು ರೀತಿಯ ಉಪಕಾರವೂ ಆಗಿದೆ. ಹಿಂದೂಧರ್ಮದ ಇತಿಹಾಸದಲ್ಲಿ ಧರ್ಮಪ್ರಚಾರಕ ಸಂಘಟನೆಯೊಂದನ್ನು ಮೊದಲ ಬಾರಿಗೆ ಪ್ರಾರಂಭಿಸಿದವರೇ ಅವರು. ನಾನು ನನ್ನ ಮೊದಲನೇ ಉಪನ್ಯಾಸದಲ್ಲಿ ನಿಮ್ಮ ಗಮನಕ್ಕೆ ತಂದಿರುವಂತೆ ಬಡತನ, ಅಸಹಾಯಕತೆ ಅನಾರೋಗ್ಯಗಳಾಗಲೀ, ಭೂಕಂಪ ಅಥವಾ ಚಂಡಮಾರುತದಂತಹ ಪ್ರಕೃತಿ ವಿಕೋಪಗಳಿಂದ ತೊಳಲುವುದಾಗಲೀ ಕರ್ಮಸಿದ್ಧಾಂತದಂತೆ ನವ್ಮ ಪೂರ್ವಜನ್ಮದಲ್ಲಿನ ಪಾಪಕೃತ್ಯಗಳ ಫಲ. ಆದ್ದರಿಂದ ಯಾರೂ ಮತ್ತೊಬ್ಬರಿಗೆ ಸಹಾಯ ಮಾಡುವ ಅವಶ್ಯಕತೆಯಿರುವುದಿಲ್ಲ. ಹಾಗೆ ಮಾಡುವುದು ನಿಯಾಮಕ ಶಕ್ತಿಗೆ ಅಡಚಣೆಯನ್ನೊಡ್ಡುವುದಾಗಿದೆ. ಇತರರ ಸಂಕಷ್ಟಗಳ ಬಗ್ಗೆ ಹಿಂದೂಗಳಲ್ಲಿರುವ ಅಸಡ್ಡೆಗೆ ಈ ಅನಿಷ್ಟ ಸಿದ್ಧಾಂತವು ಕಾರಣವಾಗಿದೆ. ಇಂತಹ ಅಸಡ್ಡೆಯಿಂದ ಬೇಸತ್ತವರಾಗಿ ರಾಮಕೃಷ್ಣ ಧರ್ಮ ಪ್ರಚಾರಕ ಮಂಡಲಿಯನ್ನು ಸ್ಥಾಪಿಸಿದ ಹೆಸರು ವಿವೇಕಾನಂದರಿಗೆ ಸಲ್ಲುತ್ತದೆ. ರಾಮಕೃಷ್ಣ ಮಠದ ಇತರರು ಇದು ಹಿಂದೂ ನಂಬಿಕೆ—ಸಂಪ್ರದಾಯಗಳ ವಿರುದ್ಧವೆಂದು ಅವರನ್ನು ವಿರೋಧಿಸಿದರೂ ಈ ಆಕ್ಷೇಪಣೆಗಳನ್ನು ಮೂಲೆಗೆ ತಳ್ಳಿದ ವಿವೇಕಾನಂದರು ತಮ್ಮ ಕಾರ್ಯವನ್ನು ಮುಂದುವರೆಸಿದರು

ವಿವೇಕಾನಂದರ ಬಗ್ಗೆ ನಾನು ಹೇಳಬೇಕಾದ ಇನ್ನೊಂದು ಮಾತಿದೆ. ಸ್ವಾಮಿ ವಿವೇಕಾನಂದ ಭಾರತಿಯವರು ಗುರುತಿಸಿರುವಂತೆ ಅವರ ವಿಚಾರಗಳಲ್ಲಿ ಅಸಲುತನ ಮತ್ತು ಎದೆಗಾರಿಕೆಯ ಗುಣಗಳಿರುವಂತೆಯೇ ಆಳವಾದ ಜ್ಞಾನದ ಕೊರತೆ ಮತ್ತು ಪ್ರತಿಷ್ಠೆಯ ಲಕ್ಷಣಗಳು ಇವೆ. ಬರಲಿರುವ ಯುಗವು ಸಮಾಜವಾದೀ ಯುಗವೆಂದು ಮೊದಲ ಬಾರಿಗೆ ಹೇಳಿದ್ದು ವಿವೇಕಾನಂದರೇ ಹೊರತು ಯಾವ ರಾಜಕಾರಣಿಯೂ ಅಲ್ಲ. ಅಷ್ಟೆ ಅಲ್ಲದೆ ಸಾಯಂಕಾಲದ ವೇಳೆಯಲ್ಲಿ ಭಗವದ್ಗೀತೆಯನ್ನು ಓದುತ್ತಾ ಕಾಲಕಳೆಯುವ ಬದಲು ಒಂದು ಗಂಟೆಕಾಲ ಫುಟ್‌ಬಾಲ್ ಆಡುವ ಯುವಕರು ನಮಗಿಂದು ಬೇಕಾಗಿದ್ದಾರೆ ಎಂದು ಹೇಳಿದವರೂ ಅವರೇ.

ಒಂದು ಕಾಲಕ್ಕೆ ಬಂಗಾಳವು ಕಾರ್ಲ್

ಮತ್ತು ಅವರ ದೃಷ್ಟಿಪ್ರಮಾಣವಾದದ (Positivism) ಪ್ರಭಾವದಲ್ಲಿತ್ತು. ಜಿ. ಹೆಚ್. ಫೋರ್ಬಸ್ ಅವರು ಬಂಗಾಳದಲ್ಲಿ ದೃಷ್ಟ ಪ್ರಮಾಣವಾದ ಎನ್ನುವ ತಮ್ಮ ಕೃತಿಯಲ್ಲಿ ಹೇಳುವಂತೆ : "ಸತ್ತ ಸಮಸ್ತರ ಹಬ್ಬವನ್ನು ಮಾಡಲು ಕಲ್ಕತ್ತಾದ ರುದ್ರ ಭೂಮಿಯಲ್ಲಿ ಪಾಶ್ಚಿಮಾತ್ಯ ಹಿಂದೂಗಳ ಸಣ್ಣಗುಂಪೊಂದು 1883 ರ ಡಿಸೆಂಬರ ನಲ್ಲಿ ಸೇರಿತ್ತು. ಫ್ರಾನ್ಸ್‌ನ ಅಗಸ್ಟ ಕಾಮ್ಟ್ (1798-1857) ಮಾನವ ಸಮಾಜವನ್ನು ತನ್ನದೇ ಆದ ವೈಜ್ಞಾನಿಕ ನಿಯಮಗಳ ಆಧಾರದಮೇಲೆ ಪುನರ್ರಚಿಸುವಂತಹ ಅತ್ಯಂತ ಸಂಕೀರ್ಣವಾದ ತನ್ನ ತತ್ವ ಮೀಮಾಂಸೆಯ ಭಾಗವಾಗಿ ಈ ಸಾಮೂಹಿಕ ಆಚರಣೆಯನ್ನು ಸೂಚಿಸಿದ್ದನು. ಮಾನವತಾ ಧರ್ಮ ಎನ್ನುವುದು ಕಾಮ್ಟ್‌ಯ ತತ್ವದ ತಿರುಳಾಗಿದ್ದು ಅನುಸರಣೆಯಲ್ಲಿ ಯೂರೋಪ್‌ನಲ್ಲೇ ಹಲವಾರು ಅನುಯಾಯಿಗಳನ್ನು ಕಳೆದು ಕೊಂಡಿತು. ಆಶ್ಚರ್ಯದ ಸಂಗತಿಯೆಂದರೆ ಬ್ರಿಟನ್ನಿನಿಂದ ಆಳಲ್ಪಟ್ಟ, ಫ್ರಾನ್ಸ್‌ನಿಂದ ಸಾವಿರಾರು ಮೈಲಿಗಳ ದೂರವಿರುವ ಭಾರತೀಯ ಪ್ರಾಂತ್ಯವಾದ ಬಂಗಾಳದಲ್ಲಿ ಕಾಮ್ಟ್‌ಯ ತತ್ವವು ದೊಡ್ಡ ಸಂಖ್ಯೆಯ ಅನುಯಾಯಿಗಳನ್ನು ಪಡೆಯಿತು.....[14] ತನ್ನ ಬೆಳವಣಿಗೆಯ ತುತ್ತ ತುದಿಯನ್ನು ಮುಟ್ಟಿದ ಹಂತದಲ್ಲಿ ಈ ದೃಷ್ಟಪ್ರಮಾಣವಾದವು ಬಂಗಾಳದಲ್ಲಿ ವಿಚಾರವಾದ ಮತ್ತು ಮಾನವತಾ ವಾದವನ್ನು ಘೋಷಿಸಿತು. ಆದರೆ ಹಿಂದೂ ಸಾಂಸ್ಕೃತಿಕ ಸನ್ನಿವೇಶದಲ್ಲಿ ಇದು ಹೆಚ್ಚುಕಾಲ ಬಾಳಲಾಗಲಿಲ್ಲ. "ಹಿಂದೂಧರ್ಮಕ್ಕೆ ಪರ್ಯಾಯ ವಾಗಿ ಇದನ್ನು ಪ್ರಾರಂಭದಲ್ಲಿ ಒಪ್ಪಿಕೊಂಡರೂ ಪುನಶ್ಚೇತನಗೊಂಡ ಹಿಂದೂಧರ್ಮಕ್ಕೆ ಅಂತಿಮ ವಾಗಿ ಇದು ಅಡಿಯಾಳಾಗಬೇಕಾಯ್ತು. ಹಿಂದೂ ಪುನರುಜ್ಜೀವನವಾದಿಗಳು ಕೂಡ ಪ್ರಗತಿಯಲ್ಲಿ ಆಸಕ್ತಿ ತೋರಿದ್ದರಿಂದ ಅವರು ದುಷ್ಟಪ್ರಮಾಣ ವಾದದ ಮನುಕುಲ ಸೇವೆಯನ್ನೂ, ಸಮಾಜದ ಒಳಿತಿಗಾಗಿ ವ್ಯಕ್ತಿಯ ಹೊಂದಾಣಿಕೆಯನ್ನೂ, ಸಾವಿನ ನಂತರದ ಬದುಕಿಗಾಗಿ ಜೀವಿಸದೆ ಸಧ್ಯದ ಬದುಕನ್ನು ಅನುಭವಿಸಬೇಕು ಎನ್ನುವ ತಾತ್ವಿಕ ನಿಲುವುಗಳನ್ನೂ ಒಪ್ಪಿಕೊಂಡರು. ದೃಷ್ಟ ಪ್ರಮಾಣವಾದ ಮತ್ತು ಸರ್ವಲೋಕಹಿತವಾದ (Utilitarianism) ಗಳಿಂದ ವಿಚಾರಗಳನ್ನು ಸ್ವೀಕರಿಸಿ ಆಧುನಿಕ ಪ್ರಗತಿಗೆ ಕಂಟಕಪ್ರಾಯ ವೆಂದು ಬಗೆದ ಪ್ರಾಚೀನ ಗೌಡಾಳಿಕೆ ಮತ್ತು ಕನ್‌ಫ್ಯೂಷಿಯಸ್ ಮೌಲ್ಯಗಳನ್ನು ನಿರ್ನಾಮ ಮಾಡಲು ಉದ್ಯುಕ್ತರಾದ ಜಪಾನೀಯರಂತೆ ಆಧುನಿಕ ಹಿಂದೂರಾಷ್ಟ್ರದ ಅಭಿವೃದ್ಧಿಗೆ ಸಹಕಾರಿ ಯಾಗಬಲ್ಲ ವಿಚಾರಗಳನ್ನು, ದೃಷ್ಟಪ್ರಮಾಣವಾದ ಮತ್ತು ಪಾಶ್ಚಾತ್ಯ ತತ್ವಮೀಮಾಂಸೆಯಿಂದ ಹಿಂದೂ ಪುನರುಜ್ಜೀವನವಾದಿಗಳು ಪಡೆದರು. ಒಟ್ಟಿನಲ್ಲಿ ಹಿಂದೂ ಪುನರುಜ್ಜೀವನದ ಸಂರಕ್ಷಣಾತ್ಮಕ ಹೊದಿಕೆಯಲ್ಲಿ ಮಾತ್ರ ಸನಾತನ ಹಿಂದೂಮೌಲ್ಯ ಗಳನ್ನು ನಿರ್ದಾಕ್ಷಿಣ್ಯವಾಗಿ ಪ್ರಶ್ನಿಸುವುದು ಸಾಧ್ಯ ವಾಯಿತು"[15] ಎನ್ನುತ್ತಾರೆ ಫೋರ್ಬ್ಸ್.

---

**ಕಳೆದ 200 ವರ್ಷಗಳ ಇತಿಹಾಸದಲ್ಲಿ ಗಾಂಧಿಯಂತಹ ಕ್ರಿಯಾಶೀಲ ವ್ಯಕ್ತಿ ಇನ್ನೊಬ್ಬ ಕಂಡು ಬಂದಿಲ್ಲ. ಆದರೂ ಅವರ ವಿಚಾರಗಳಲ್ಲಿ ಒಂದಂಗುಲದಷ್ಟು ಬೆಳವಣಿಗೆ ಎಂಬುದಿಲ್ಲ ಈ ದೃಷ್ಟಿಯಿಂದ ಗಾಂಧಿಯನ್ನು ಒಬ್ಬ ಕ್ರಮಬದ್ಧ ಚಿಂತಕ ಎಂದು ಕರೆಯುವುದು ಸಾಧ್ಯವಿಲ್ಲ**

---

ಒಂದು ರೀತಿಯಲ್ಲಿ ನೋಡಿದರೆ 19ನೇ ಶತಮಾನದಲ್ಲಿ ಮಹಾರಾಷ್ಟ್ರದ ಜನಜೀವನ ಮತ್ತು ವಿಚಾರಗಳು ವೇದಾಂತಿಗಳಿಂದ ಪ್ರಭಾವಿತವಾಗದೆ ವಿಚಾರವಾದಿಗಳಿಂದ ಪ್ರಭಾವಿತವಾದುದರಿಂದ ಅಲ್ಲಿಯ ಪರಿಸ್ಥಿತಿಯು ಆಶಾದಾಯಕವಾಗಿತ್ತು. ಗೋಪಾಲರಾವ್ ದೇಶ್‌ಮುಖ್ (ಲೋಕಹಿತ ವಾದಿ), ಜ್ಯೋತಿರಾವ್ ಪುಲೆ ಮತ್ತು ಗೋಪಾಲ ಗಣೇಶ ಅಗರ್‌ಕರ್ ಇವರು ಈ ಚಳುವಳಿಯ ಅಗ್ರಗಣ್ಯರು. ಈ ಮೂವರೂ ಕೂಡ ಪುರೋಹಿತವರ್ಗದ ಪ್ರಾಬಲ್ಯ, ಜಾತಿ ಪದ್ಧತಿಯ ಅಸಮಾನತೆ ಮತ್ತು ಅಸ್ಪೃಶ್ಯತೆಯ ಅಮಾನವೀಯತೆಯನ್ನು ವಿರೋಧಿಸಿದರು. ವಿಚಾರಸ್ವಾತಂತ್ರ್ಯ ಮತ್ತು ವೈಯಕ್ತಿಕ ಸ್ವಾತಂತ್ರ್ಯಗಳಿಗಾಗಿ ತೀವ್ರ ಹೋರಾಟ ನಡೆಸಿದರು. ಈ ಮೂವರಲ್ಲಿ ಪುಲೆ ಅವರು ತಮ್ಮ ಜೀವಿತಾವಧಿಯಲ್ಲೆ ಮಹಾತ್ಮರೆಂದು ಕರೆಯಲ್ಪಟ್ಟರು. ಮಿಕ್ಕ ಇಬ್ಬರಂತಲ್ಲದೆ ಅವರು ತೀರಾ ಬಡಕುಟುಂಬದಿಂದ ಬಂದವರು. ಜಾತಿ ಯಿಂದ ಮಾಲಿ (ತೋಟ-ಲಸದಾಳು) ಯಾಗಿದ್ದರೂ 'ಏಕಾಗ್ರತೆ ಮತ್ತು ಪ್ರಾಮಾಣಿಕತೆ ಗಳಿಂದ ಪ್ರತಿಯೊಂದು ಪ್ರಗತಿಪರ ಚಳುವಳಿ ಯಲ್ಲೂ ಸಕ್ರಿಯವಾಗಿ ಭಾಗವಹಿಸುತ್ತಾ ಉದಾತ್ತತೆಯನ್ನು ಗಳಿಸಿದರು.

ಮಹಾದೇವ ಗೋವಿಂದ ರಾನಡೆಯವರು ಈ ಮರಾಠೀ ವಿಚಾರವಾದಿಗಳ ಸಮಕಾಲೀನರಾಗಿದ್ದ ನಿಷ್ಕಪಟ ಮನಸ್ಸಿನ ಧರ್ಮವಾದಿಯಾಗಿದ್ದರು. ಬೊಂಬಾಯಿ ಉಚ್ಚನ್ಯಾಯಾಲಯದ ನ್ಯಾಯಾ ಧೀಶರಾಗಿದ್ದರೂ ಸಹ ಹಲವಾರು ಜನಪರ ಚಳುವಳಿಗಳಲ್ಲಿ ಸಕ್ರಿಯವಾಗಿ ಭಾಗವಹಿಸಿದ್ದರು. ಭಾರತೀಯ ರಾಷ್ಟ್ರೀಯ ಕಾಂಗ್ರೆಸ್‌ನ ಪ್ರಾರಂಭಿಕ ವರ್ಷಗಳಲ್ಲಿ, ಸರ್ಕಾರಿ ನಿಯಮಗಳ ಕಾರಣ ದಿಂದಾಗಿ ಹಿನ್ನೆಲೆಯಲ್ಲಿ ಇರಬೇಕಾಗಿ ಬಂದರೂ, ಅದರ ಚೇತನಶಕ್ತಿಯಾಗಿ ಕಾರ್ಯ ನಿರ್ವಹಿಸಿ ದ್ದರು. ಅವರು ಗೋಪಾಲಕೃಷ್ಣ ಗೋಖಲೆ ಯವರ ಗುರುಗಳಾಗಿದ್ದರು, ಮಹಾನ್ ಉದಾರ ವಾದಿ ಪ್ರಾಮಾಣಿಕ ವ್ಯಕ್ತಿತ್ವವನ್ನು ಉಳ್ಳವ ರಾಗಿದ್ದರು. ಯಾರಿಗೂ ವಿಶೇಷ ಗೌರವವನ್ನು ತೋರಿಸದಿದ್ದ ಬಿ. ಆರ್. ಅಂಬೇಡ್ಕರ್ ಕೂಡ ಪುಲೆ ಮತ್ತು ರಾನಡೆಯವರ ಬಗ್ಗೆ ಗೌರವಾದರ ಗಳನ್ನು ಇಟ್ಟುಕೊಂಡಿದ್ದರು.

ಗಾಂಧಿಯನ್ನು ಕುರಿತು ಮಾತನಾಡುವ ಮೊದಲು ಒಂದು ವಿಶೇಷ ಅಂಶವನ್ನು ಗಮನಿ ಸುವುದು ಸೂಕ್ತ. ಸಾಮಾನ್ಯವಾಗಿ ಕಾಂಗ್ರೆಸಿ ಗರೆಲ್ಲರೂ ಧಾರ್ಮಿಕ ದೃಷ್ಟಿಕೋನವನ್ನು ಇಟ್ಟು ಕೊಂಡಿರುವುದು ಮಾತ್ರವಲ್ಲದೆ ಜಾತಕ, ಹಸ್ತ ಸಾಮುದ್ರಿಕೆ, ತಂತ್ರವಿದ್ಯೆಗಳಲ್ಲಿ ಆಸಕ್ತಿಯುಳ್ಳವ ರಾಗಿದ್ದರು. ಆದರೆ ಉದಾರವಾದಿಗಳಲ್ಲಿ ಹಲವರು ವಿಚಾರವಾದಿಗಳಾಗಿದ್ದರು. ಇದು ಪ್ರಾಯಶಃ ಅವರು ಜೆ. ಎಸ್. ಮಿಲ್ ಮತ್ತು ಲಾರ್ಡ ಮೋರ್ಲೆಯವರ ವಿಚಾರ ಪ್ರಭಾವಕ್ಕೆ ಒಳಗಾದ ಪರಿಣಾಮ.

ನನ್ನ ಮೊದಲನೆ ಉಪನ್ಯಾಸದಲ್ಲಿ ಹೇಳಿದಂತೆ ಗಾಂಧಿಯು ವಿಚಾರವಾದಿಯಾಗಿರಲಿಲ್ಲ. ಅವರು ವೈಚಾರಿಕತೆಯ ವಿರೋಧಿಗಳಾಗಿದ್ದರು ಎಂದರೂ ತಪ್ಪಲ್ಲ. ಕಳೆದ 200 ವರ್ಷಗಳ ನಮ್ಮ ಇತಿಹಾಸದಲ್ಲಿ ಗಾಂಧಿಯ ಕ್ರಿಯಾಸಾಮರ್ಥ್ಯವನ್ನು ಸರಿದೂಗಿಸುವಂತಹ ಮತ್ತೊಬ್ಬ ಕ್ರಿಯಾಶೀಲ ವ್ಯಕ್ತಿ ಕಂಡುಬರುವುದಿಲ್ಲ. ಆದರೆ ವೈಚಾರಿಕತೆಯ ವಿಷಯದಲ್ಲಿ ಅವರ ಪ್ರಭಾವವು ಪ್ರತಿಗಾಮಿ ಸ್ವರೂಪದ್ದಾಗಿತ್ತು. ಅವರು ಮುಟ್ಟದ ಯಾವ ವಿಚಾರವೂ ಇಲ್ಲ ಎಂಬುದು ನಿಜ. ಶೌಚಾಲಯ ದಿಂದ ಹಿಡಿದು ಶಾಸಕಾಂಗದವರೆಗೂ, ದೇವರಿಂದ ಹಿಡಿದು ಆಹಾರಪದ್ಧತಿಯ ವರೆಗೂ ಯಾವ ವಿಷಯದಲ್ಲೇ ಆಗಲಿ ಅವರು ಒಂದಲ್ಲಾ ಒಂದು ಹೇಳಿಕೆ ನೀಡಿರುವುದು ಕಂಡುಬರುತ್ತದೆ.

(ಕೊನೆಯ ಪುಟ)

ಕರ್ನಾಟಕ ಸರ್ಕಾರ

# "ಜಾತಿ ಪ್ರಮಾಣ ಪತ್ರಗಳ ವಿತರಣಾ ವಿಧಾನದಲ್ಲಿ ಸರಳೀಕರಣ"

ಪದೇ ಪದೇ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ ಜನತೆಗೆ ಇಲ್ಲಿಯವರೆಗೆ ಕೊಡಲಾಗುತ್ತಿರುವ ಜಾತಿ ಪ್ರಮಾಣ ಪತ್ರಗಳಿಂದ ತಹಶೀಲ್ದಾರರುಗಳಿಗೆ ಹೆಚ್ಚಿನ ಕೆಲಸ ಹಾಗೂ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ ಜನತೆಗೆ ಕಾಲ, ಹಣ ಹಾಗೂ ಶ್ರಮಗಳ ಹರಣವಾಗುತ್ತಿತ್ತು.

ಈ ಪರಿಸ್ಥಿತಿಯನ್ನು ತಪ್ಪಿಸಿ, ರಾಜ್ಯದ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ ಜನತೆಗೆ ಸುಲಭವಾಗಿ ಜಾತಿ ಪ್ರಮಾಣ ಪತ್ರ ದೊರಕುವಂತೆ ಮಾಡಲು ರಾಜ್ಯ ಸರ್ಕಾರ 23ನೇ ಮಾರ್ಚ್ ಮತ್ತು 12ನೇ ಆಗಸ್ಟ್, 1987 ರಂದು ಆದೇಶಗಳನ್ನು ಹೊರಡಿಸಿದೆ. ಈ ಆದೇಶಗಳ ಪ್ರಕಾರ ಒಂದು ಸಲ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ ಜನತೆಗೆ ಕೊಟ್ಟ ಜಾತಿ ಪ್ರಮಾಣ ಪತ್ರಗಳು (ಕಾನೂನಿನ ಪ್ರಕಾರ ರದ್ದು ಪಡಿಸದಿದ್ದರೆ ಮಾತ್ರ) ಸರ್ವಕಾಲಕ್ಕೂ ಸಿಂಧುವಾಗಿರುತ್ತದೆ. ಮೂಲ "ಜಾತಿ ಪ್ರಮಾಣ ಪತ್ರದ" ದೃಢೀಕೃತ ಪ್ರತಿಯನ್ನು ಎಲ್ಲಾ ಅಧಿಕಾರಿಗಳು ಕಡ್ಡಾಯವಾಗಿ ಒಪ್ಪಿಕೊಳ್ಳಲೇಬೇಕು.

ಮೇಲ್ಕಂಡ ಸರಳೀಕರಣ ವಿಧಾನದಿಂದ ಇನ್ನು ಮುಂದೆ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ ಜನತೆ ತಮ್ಮ ಜಾತಿ ಪತ್ರಗಳನ್ನು ಪಡೆಯಲು ಪದೇ ಪದೇ ತಹಶೀಲ್ದಾರರ ಕಛೇರಿಗೆ ಹೋಗಬೇಕಾದ್ದಿಲ್ಲ. ಒಮ್ಮೆ ಪಡೆದ ಪ್ರಮಾಣ ಪತ್ರದ ದೃಢೀಕರಿಸಿದ ಪ್ರತಿಗಳನ್ನು ಎಲ್ಲಾ ಉದ್ದೇಶಗಳಿಗೂ ಮತ್ತು ಎಲ್ಲಾ ಕಾಲಕ್ಕೂ ಉಪಯೋಗಿಸಬಹುದಾಗಿದೆ.

ವಿವರಣೆಗಳೇನಾದರೂ ಬೇಕಾಗಿದ್ದಲ್ಲಿ ಅವುಗಳನ್ನು ಸಂಬಂಧಪಟ್ಟ ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳಿಂದ ಪಡೆಯಬಹುದಾಗಿದೆ.

ನಿರ್ದೇಶಕರು
ಸಮಾಜ ಕಲ್ಯಾಣ ಇಲಾಖೆ

# ಕೋಲಾರ: ಭೂಮಿಗಾಗಿ ಧರಣಿ ಪಿಕೆಟಿಂಗ್

ಗೌರಿಬಿದನೂರು; ಅ : 19,

ಸುಮಾರು 2000 ಜನ ದ.ಸಂ. ಸ, ಕಾರ್ಯಕರ್ತರು ಇಲ್ಲಿನ ತಾಲೂಕು ಕಚೇರಿಯ ಮುಂದೆ ಭೂಮಿ ಮತ್ತು ನಿವೇಶನ ಹಂಚಿಕೆಯಲ್ಲಿ ಸರ್ಕಾರಿ ಅಧಿಕಾರಿಗಳು ತೋರುತ್ತಿರುವ ನಿರ್ಲಕ್ಷ್ಯ, ವಿಳಂಬ, ಕಿರುಕುಳ ಪ್ರವೃತ್ತಿಯನ್ನು ವಿರೋಧಿಸಿ ಪಿಕೆಟಿಂಗ್ ನಡೆಸಿದರು,

ಈ ಪಿಕೆಟಿಂಗ್ ಕಾರ್ಯಕ್ರಮದಲ್ಲಿ 500 ಜನ ಮಹಿಳೆಯರುಪಾಲುಗೊಂಡಿದ್ದೊಂದು ಮಹತ್ವದ ಘಟನೆಯಾದರೆ ಈ ಇಡೀ ಪಿಕೆಟಿಂಗ್ ನೇತೃತ್ವ ವಹಿಸಿದ್ದವರು ಮಹಿಳಾ ಸಂಚಾಲಕಿಯಾದ ಸಿ. ಪಾರ್ವತಮ್ಮ. ಸುಮಾರು ಬೆಳಗಿನ 9 ಗಂಟೆಗೆ ಪ್ರಾರಂಭವಾದ ಪಿಕೆಟಿಂಗ್ ಮಧ್ಯಾನ್ಹ 2 ಗಂಟೆಯವರೆಗೂ ಮುಂದುವರೆಯಿತು. ದ.ಸಂ.ಸ. ದ ಈ ಅಪೂರ್ವ ಪ್ರತಿಭಟನೆಗೆ ಮಣಿದ ಅಧಿಕಾರಿಗಳು 2 ಗಂಟೆಗೆ ಪ್ರತಿನಿಧಿಗಳನ್ನು ಮಾತುಕತೆಗೆ ಕರೆದರು. ಚಿಕ್ಕಬಳ್ಳಾಪುರ ವಿಭಾಗ ಅಧಿಕಾರಿಗಳ ಅಧ್ಯಕ್ಷತೆಯಲ್ಲಿ ನಡದ ಮಾತುಕತೆಯಲ್ಲಿ ಈ ಕೆಳಕಂಡ ತೀರ್ಮಾನಗಳನ್ನು ಕೈಗೊಳ್ಳಲಾಯೀತು.

1. ಪಾಪಗಾನಹಳ್ಳಿಯ ಸರ್ವೆ ನಂ. 45 ಮತ್ತು 70 ರ ಬಗರ್ ಹುಕುಂ ಫಲಾನುಭವಿಗಳಿಗೆ 60 ದಿನಗಳಲ್ಲಿ ಸಾಗುವಳಿ ಪತ್ರ ನೀಡಿ ಸಂಪೂರ್ಣ ಪೊಲೀಸ್ ರಕ್ಷಣೆ ಒದಗಿಸಲಾಗುವುದು.

2. ಡಿ. ಪಾಳ್ಯ ಸ. ನಂ. 47 ಸ ಕೆರೆ ಅಂಗಳವನ್ನು ಸಾಗುವಳಿ ಮಾಡುತ್ತಿರುವವರಿಗೆ ಸಣ್ಣ ನೀರಾವರಿ ಅಧಿಕಾರಿಗಳೊಂದಿಗೆ ವ್ಯವಹರಿಸಿ ವರದಿ ಬಂದ ಕೂಡಲೆ ಸಾಗುವಳಿ ಪತ್ರ ವಿತರಿಸಲಾಗುವುದು.

3. ತೊಂಡೇಬಾವಿ. ಜಿ. ಬೊಮ್ಮಸಂದ್ರದ ವಸತಿಹೀನರಿಗೆ ನಿವೇಶನಗಳನ್ನು ಜಿಲ್ಲಾಧಿಕಾರಿಗಳಿಂದ ಅಂತಿಮ ಅಧಿಸೂಚನೆ ಬಂದ ಕೂಡಲೆ ವಿತರಿಸಲಾಗುವುದು.

4. ಬಾಕಿ ಇರುವ 16 ಜನ ಸದಸ್ಯರನ್ನು ನೊಂದಾಯಿಸಿ 200 ಸದಸ್ಯರಾದ ಕೂಡಲೆ 'ನಗರಗೆರೆ_ಕಲ್ಲು ಕುಟಿಗರ ಸಹಕಾರ ಸಂಘ' ಸ್ಥಾಪಿಸಿ ನವೆಂಬರ್ ತಿಂಗಳೊಳಗೆ ನೊಂದಾಯಿಸಲಾಗುವುದು.

5. ಕಸಬಾ ಹೊಬಳಿ ಚೀಗಟಗೆರೆ ದಲಿತರಿಗೆ ಅಲ್ಲಿನ ಸರ್ವೆ ನಂ 10. ಮತ್ತು 12ರ 13 ಎಕರೆ 20 ಗುಂಟೆ ಜಮೀನಿನಲ್ಲಿ ಕೆಲವರು ಅಕ್ರಮ ಸಾಗುವಳಿ ಮಾಡಿರುವುದರಿಂದ ಅವರನ್ನು ಅಲ್ಲಿಂದ ಸ್ಥಳಾಂತರಿಸಿ ಡಿಸೆಂಬರ್ ಅಂತ್ಯದಲ್ಲಿ ನಿವೇಶನ ಹಂಚಲಾಗುವುದು.

6. ಕಸಬಾ ಹೋಬಳಿ ಕುಡುಮಲಕುಂಟೆ ದಲಿತರಿಗೆ ನವೆಂಬರ್ ಒಳಗಾಗಿ ಭೂಸ್ವಾಧೀನ ಪಡಿಸಿ ಕೊಳ್ಳಲಾಗುವುದು.

ಸುಮಾರು 4 ಗಂಟೆಗಳ ಕಾಲ ನಡೆದ ಈ ಮಾತುಕತೆಯಲ್ಲಿ ಅಧಿಕಾರಿಗಳ ಕಡೆ ಟಿ. ವಿ. ಮುನಿನಾರಾಯಣಪ್ಪ (ತಹಶಿಲ್ದಾರ್), ಸಿ. ವಿ. ರಾಮಮೂರ್ತಿ (ಕ್ಷೇತ್ರಾಭಿವೃದ್ಧಿ ಅಧಿಕಾರಿಗಳು) ಕೆ. ಎಸ್. ಗಂಗಾಧರಶೆಟ್ಟಿ-(ವೃತ್ತ ಆರಕ್ಷಕ ನಿರೀಕ್ಷಕರು, ಚಿಕ್ಕಬಳ್ಳಾಪುರ), ಎಂ ಶಂಕರಪ್ಪ (ಉಪನಿರೀಕ್ಷಕರು, ಮತ್ತು ಮೋತಿರಾಮ್ ತಾಲೂಕು ಸಮಾಜ ಕಲ್ಯಾಣಾಧಿಕಾರಿಗಳು) ಭಾಗವಹಿಸಿದ್ದರು. ದ. ಸಂ. ಸ. ಪ್ರತಿನಿಧಿಗಳಾಗಿ ಎಂ. ನಾರಾಯಣಸ್ವಾಮಿ (ತಾಲೂಕ ಸಂಚಾಲಕ), ಹೆಚ್. ಎಂ ರಾಮಚಂದ್ರ (ಜಿಲ್ಲಾ ಸಂಘಟನಾ ಸಂಚಾಲಕ), ಮುನಿಆಂಜನಪ್ಪ (ಜಿಲ್ಲಾ ಖಜಾಂಚಿ) ಮುಂತಾದವರು ಭಾಗವಹಿಸಿದ್ದರು. ಕಾರ್ಯಕ್ರಮದ ಅಂತ್ಯದಲ್ಲಿ ಬಹಿರಂಗ ಸಭೆ ನಡೆಯಿತು.

ಆಯುಷ್ಯವಿಡೀ ಉಳ್ಳವರ ಹೊಲಗದ್ದೆಗಳಲ್ಲಿ ಜೀವತೇದ ಜಿಲ್ಲೆಯ ದಲಿತರ ಕಣ್ಣಿನಲ್ಲಿ ಇಂದು ತುಂಡು ಭೂಮಿಯ ಕನಸು ಚಿಗುರತೊಡಗಿದೆ. ಈಗಾಗಲೆ ಉಳ್ಳ ಬಲಾಢ್ಯರು ಕಬಳಿಸಿ ನುಂಗಿಸಿದ ಚೂರುಪಾರು ಭೂಮಿಯನ್ನು ಉತ್ತು, ಬಿತ್ತು ದಕ್ಕಿಸಿಕೊಳ್ಳಲು ಇನ್ನಿಲ್ಲದಂತೆ ಪಡಿಪಾಟಲು ಬೀಳುತ್ತಿದ್ದಾರೆ. ಭೂಮಾಲಿಕರ ಮುಚ್ಚು ದೊಣ್ಣೆಗಳಿಗೆ ನೈಯೊಡ್ಡಿ ನೆತ್ತರು ಚೆಲ್ಲಿದ್ದಾರೆ.

ಈ ಮುಚ್ಚು, ದೊಣ್ಣೆಗಳ ಜತೆಗೆ ಇಂದು ಅಧಿಕಾರಯಂತ್ರ ಕೂಡ ತನ್ನ ಪೆನ್ನು ಸೇರಿಸಿ ದಲಿತರನ್ನು ದಿಕ್ಕುಗೆಡಿಸಿದೆ. ಹತ್ತಾರು ವರ್ಷಗಳಿಂದ ಉಳುತ್ತಾ ಬಂದ ಭೂಮಿಗೆ ಹಕ್ಕು ಪತ್ರ ನೀಡದೆ, ದಲಿತರ ಪಹಣಿಗಳನ್ನು ಮುಚ್ಚು, ದೊಣ್ಣೆಗಳ ಹೆಸರಿಗೆ ವರ್ಗಾಯಿಸಿ ಇನ್ನಿಲ್ಲದಂತೆ ಕಿರುಕುಳ, ನಿರ್ಲಕ್ಷ್ಯ ಮುಂದುವರೆಸಿದೆ. ಇದನ್ನು ವಿರೋಧಿಸಿ ಕೂಡಲೇ ನಿವೇಶನ, ಸಾಗುವಳಿ ಪತ್ರ ನೀಡುವಂತೆ ನಡೆದ ಹೋರಾಟ ಇಲ್ಲಿದೆ.

ಸಂ.

## ಕಣ್ಣು ಹೋಗಿದ್ದರೂ ಅಡ್ಡಿಯಿಲ್ಲ

(6ನೇ ಪುಟದಿಂದ)

ದಿಂದ ಎತ್ತಿ ತಲೆ ಮೇಲಿಟ್ಟು ನಡೆಯುವಾಗ ಆತನ ಹೆಜ್ಜೆಗಳು ಭಾರಕ್ಕೆ ಕುಸಿದು, ತಲೆಯ ಮೇಲಿದ್ದ ಡಬ್ಬಿ ಅವನ ಮೈಯೆಲ್ಲ ಆಕ್ರಮಿಸಿ ಕುಸಿದು ಕೂತ! ಇವರ ಮಲ ಅವನ ದೇಹ-ಮನಸ್ಸುಗಳನ್ನು ಆಕ್ರಮಿಸಿ ಒಂದೆರಡು ನಿಮಿಷ ಪ್ರಜ್ಞೆ ಕಳೆದುಕೊಂಡ. ಆ ನಂತರ ತಲೆಯ ಮೇಲೆ ನೀರು ಬಿದ್ದು ಮಲತೊಳೆದಾಗಲೇ ಸುತ್ತಲಿನ ಜನಕ್ಕ ಈತ ಬದುಕಿದ್ದಾನೆ ಸತ್ತಿಲ್ಲವೆಂದು ಖಾತ್ರಿಯಾದದ್ದು!

ಈ ಘಟನೆ ಹೇಳುವಾಗ ನನ್ನ ಅಣ್ಣನ ಮುಖದಲ್ಲಿ ವಿಕೃತವಾದ ನಗುವಿದ್ದರೆ ನನಗೆ ದಿಗ್ಭ್ರಮೆಯಾಗಿತ್ತು. ತುಂಬ ನೋವಿನಿಂದ ನಾನು ಕೇಳಿದೆ-'ಇದು ಅಮಾನವೀಯಂತ ನಿನಗೆ ಅನ್ನಿಸೊಲ್ವಾ ? ಹೊಸ ಮಾದರಿ ಪಾಯಿಖಾನೆ ಯಾಕೆ ನೀವು ಕಟ್ಟಿಸೋಲ್ಲ ?' ಅವನೆಂದ-ಮೊದನೆಲಯದಾಗಿ ಊರು ಮುಳುಗುತ್ತೆ. ಮತ್ತೆ ಹೇಗಿದ್ದರೂ ಎತ್ತಿಹಾಕೋರಿದ್ದಾರಲ್ಲ ?'

ಈಗಲೂ ನೀವು ನಮ್ಮೂರಿನ ಕೆಲ್ಲಿಗೆ ಬಂದರೆ ಅಲ್ಲಿ ನನ್ನಣ್ಣ, ಆ ಕಪ್ಪು ಹುಡುಗ ಕಾಣುತ್ತಾರೆ, ಅದರೊಂದಿಗೆ ಸಹಿಸಲಾಗದ ಹೊಲಸುವಾಸನೆ ಮುತ್ತುತ್ತದೆ. ಆದರೆ ವಾಸನೆ ಅವರ ಮಲದ್ದೋ ಮನಸ್ಸಿನ ಗುಹೆಯಲ್ಲಡಗಿದ ಕತ್ತಲೆಯದೋ ಗೊತ್ತಾಗುವುದಿಲ್ಲ.

# ಎಲ್ಲಿ ತಪ್ಪಿದೆ? ಏನು ಮಾಡಬೇಕು?

ಕಳೆದ ಹಲವತ್ತು ವರ್ಷಗಳಲ್ಲಿ ಕಾಂಗ್ರೆಸ್ ಮತ್ತು ಕಾಂಗ್ರೆಸ್ಸೇತರ ಸರ್ಕಾರಗಳು ದೇಶದ ಭ್ರಷ್ಟ ಮತ್ತು ದಮನಕಾರೀ ವ್ಯವಸ್ಥೆಯನ್ನು ಇನ್ನಷ್ಟು ಪುಷ್ಟಿಗೊಳಿಸಿವೆ. ಪಂಚವಾರ್ಷಿಕ ಯೋಜನೆಗಳ ಮೇಲೆ ಕೋಟಿ ಕೋಟಿ ರೂಪಾಯಿಗಳು ಖರ್ಚುಮಾಡಿದ ನಂತರವೂ ಬರ, ಕ್ಷಾಮ, ರೋಗರುಜಿನ ಮತ್ತು ನೆರೆ ಹಾವಳಿ ಹೆಚ್ಚುತ್ತಲೇ ಇದೆ. ನಿರುದ್ಯೋಗ ಮತ್ತು ಬೆಲೆ ಏರಿಕೆ ಹತೋಟಿ ಮೀರಿದ್ದೆ, ದಲಿತರು ಆದಿವಾಸಿಗಳು, ರೈತರು ಮತ್ತು ಮಹಿಳೆಯರ ಯಾವೊತ್ತಿನ ಸಂಕಷ್ಟ ರೂಪಾಂತರಗೊಂಡು ಮುಂದುವರೆದಿದೆಯೇ ಹೊರತು ಕೊನೆಗೊಂಡಿಲ್ಲ. ಇವತ್ತಿನ ಯಾವ ಸರ್ಕಾರವೂ ಈ ಅಧಃಪತನದ ಸ್ಥಿತಿಯನ್ನು ಎದುರಿಸಲು ಬೇಕಾದ ಇಚ್ಛಾಶಕ್ತಿಯನ್ನಾಗಲೀ, ವೈಚಾರಿಕ ರಾಜಕೀಯ ದೃಷ್ಟಿಯನ್ನಾಗಲೀ ರೂಢಿಸಿಕೊಂಡಿಲ್ಲ. ಸಮಾನ ತತ್ವದ ಸಾಮಾಜಿಕ ಬದುಕನ್ನು ಕಟ್ಟುವಲ್ಲಿ ಈಗಿನ ರಾಜಕೀಯ ವ್ಯವಸ್ಥೆ ಪೂರ್ಣವಾಗಿ ನಿಷ್ಪ್ರಯೋಜಕವಾಗಿದೆ.

ಆದ್ದರಿಂದ ಸಾಮಾಜಿಕ ಬದಲಾವಣೆಗಾಗಿ ಹೋರಾಟ ನಡೆಸುತ್ತಿರುವ ಸಂಘಟನೆಗಳಿಂದು ರಾಷ್ಟ್ರವನ್ನು ಪುನಃಶ್ಚೇತನಗೊಳಿಸುವ ರಾಜಕೀಯ ಶಕ್ತಿಯೊಂದನ್ನು ಹುಟ್ಟುಹಾಕುವುದು ಅನಿವಾರ್ಯ.

## ಬರ ಮತ್ತು ನೆರೆಹಾವಳಿ

ನೆರೆ ಮತ್ತು ತದನಂತರದ ಕ್ಷಾಮ ಪರಿಸ್ಥಿತಿ ಪದೇ ಪದೇ ಹೆಚ್ಚಿದ್ದು. ಸರ್ಕಾರವು ತನ್ನ ಅಭಿವೃದ್ಧಿಯೋಜನೆಗಳ ಸಂಪೂರ್ಣ ವೈಫಲ್ಯ ಮತ್ತು ಆತ್ಮಘಾತುಕತನವನ್ನು ಒಪ್ಪಿಕೊಳ್ಳಲೇಬೇಕಿದೆ. ಪರ್ಯಾಯ ನೀತಿಯೊಂದನ್ನು ಹುಟ್ಟುಹಾಕಲು ಈಗಿನ ಸರ್ಕಾರದ ನೀತಿಯ ಬಗ್ಗೆ ರಾಷ್ಟ್ರವ್ಯಾಪಿ ಚರ್ಚೆ ಅಗತ್ಯ. ಇದು ಸರ್ಕಾರದ ನೈತಿಕ ಜವಾಬ್ದಾರಿ. ಈ ಕಳವಳಕಾರಿ ಸ್ಥಿತಿಯನ್ನು ಸಮರ್ಥವಾಗಿ ಎದುರಿಸಲು ಅಸಾಮಾನ್ಯ ಕ್ರಮಗಳನ್ನು ಕೈಗೊಳ್ಳಬೇಕು.

ಅನಗತ್ಯ ಐಷಾರಾಮಿ ವಸ್ತುಗಳ ಉತ್ಪಾದನೆ ಮತ್ತು ಸಮಾಜದ ಒಂದು ವರ್ಗದ ದುಂದುವೆಚ್ಚಗಳಿಗೆ ಕಡಿವಾಣ ಹಾಕಬೇಕು. ಆಗ ಬರ, ನೆರೆ ಹಾವಳಿ ಪರಿಹಾರಕ್ಕೆ, ಚಿಂತಾಜನಕ ಹಣಕಾಸು ಸ್ಥಿತಿಯ ಸಬೂಬು ಹೇಳಲು ಸಾಧ್ಯವಾಗುವುದಿಲ್ಲ. ಕೇವಲ ಕಣ್ಣೊರೆಸುವ ಅರ್ಥಹೀನ ಕ್ರಮಗಳನ್ನು ಹಮ್ಮಿಕೊಳ್ಳುವುದರಿಂದ ಏನೇನೂ ಲಾಭವಿಲ್ಲ.

ನೈಸರ್ಗಿಕ ಪ್ರಕೋಪಗಳಿಗೆ ಈಡಾದ ಕುಟುಂಬಗಳಿಗೆ ಒಂದು ವರ್ಷಕ್ಕೆ ಅಗತ್ಯವಾದಷ್ಟು ಅನ್ನ-ಬಟ್ಟೆ, ವಸತಿ ನಿರ್ಮಾಣ, ಔಷಧೋಪಚಾರ, ಶಿಕ್ಷಣ, ವ್ಯವಸಾಯಕ್ಕೆ ಬೇಕಾದ ಮೂಲಧನಗಳನ್ನು ಒದಗಿಸಬೇಕು. ಇಂತಹ ಪ್ರದೇಶಗಳಲ್ಲಿ ರೈತರ ಕೃಷಿಕಾರ್ಮಿಕರ ಸಾಲಗಳನ್ನು ಮನ್ನಾ ಮಾಡಬೇಕು.

---

ಆಗಸ್ಟ್ 22 ರಿಂದ 24ರ ವರೆಗೆ ವಾರಣಾಸಿಯಲ್ಲಿ ಪಕ್ಷಾತೀತ, ಸಂಘಟನೆಗಳು ಒಂದು ರಾಜಕೀಯ ಸಮನ್ವಯ ಸಮಿತಿಯ ರಚನೆ ಕುರಿತು ಪರಿಶೀಲಿಸಿದವು.

ಛಾತ್ರ ಯುವ ಸಂಘರ್ಷವಾಹಿನಿ, ಉತ್ತರ ಭಾಗ ತಪಶೀಲಿ ಜಾತಿ ಮತ್ತು ಆದಿವಾಸಿ ಸಂಘಟನೆ, ಕರ್ನಾಟಕ ದ. ಸಂ. ಸ, ಕ॥ ರಾಜ್ಯ ರೈತ ಸಂಘ, ಉತ್ತರಖಂಡ ಸಂಘರ್ಷವಾಹಿನಿ ಮತ್ತು ಸಮತಾ ಸಂಘಟನೆ ಈ ಚರ್ಚೆಯಲ್ಲಿ ಪಾಲುಗೊಂಡಿದ್ದ ಪ್ರಮುಖ ಸಂಘಟನೆಗಳು

ಈ ಲೇಖನದಲ್ಲಿ ಅಂಥ ಸಂಘಟನೆ ಯಾವುದನ್ನು ದೃಷ್ಟಿಯಲ್ಲಿಟ್ಟುಕೊಳ್ಳಬೇಕು ಎಂಬುದನ್ನು ಚರ್ಚಿಸಲಾಗಿದೆ.

---

## ಬೆಲೆನಿರ್ಧಾರ

ಬ್ರಿಟೀಷರ ಕಾಲದಿಂದಲೂ ನಿರಂತರವಾಗಿ ಮುಂದುವರೆದುಕೊಂಡು ಬಂದಿರುವ ಹಳ್ಳಿಗಳ ಶೋಷಣೆಯನ್ನು ಕೊನೆಗಾಣಿಸಲು ಕೈಗಾರಿಕಾ ಉತ್ಪನ್ನಗಳ ಹಾಗೂ ಕೃಷಿ ಉತ್ಪನ್ನಗಳ ಬೆಲೆಗಳ ನಿರ್ಧಾರಣೆಗಳಲ್ಲಿ ಸಮಾನ ಮಾನದಂಡಗಳನ್ನು ಬಳಸಬೇಕು. ಉತ್ಪಾದನಾ ವೆಚ್ಚ ಮತ್ತು ಲಾಭಗಳನ್ನು ನಿರ್ಧರಿಸಬೇಕಾದ ನೀತಿಯು ಒಂದೇ ರೂಪದ್ದಾಗಿರಬೇಕು. ಕನಿಷ್ಠ ವೇತನ ಸರ್ಕಾರದ ರಿಯಾಯಿತಿ ಮತ್ತು ನೆರವು ಮುಂತಾದವುಗಳಲ್ಲಿ ಕೃಷಿ ಕ್ಷೇತ್ರವು ಬೇರೆ ಯಾವುದೇ ಉದ್ಯಮದೊಂದಿಗೆ ಸಮಾನವಾಗಿ ಪರಿಗಣಿತವಾಗಬೇಕು.

## ಭೂ ಸುಧಾರಣೆಗಳು

ಭೂಮಿತಿ ಶಾಸನವನ್ನು ಕಟ್ಟುನಿಟ್ಟಾಗಿ ಅನುಷ್ಠಾನಗೊಳಿಸಬೇಕು. ಕೈಗಾರಿಕಾ ಉದ್ದೇಶಗಳಿಗಾಗಿ ಬಳಸುವ ನಗರ ಪ್ರದೇಶದ ಭೂಮಿಗಳ ಮೇಲೆ ಭೂಮಿತಿ ಶಾಸನ ಅನ್ವಯಿಸಬೇಕು. ಇದು ಅಂತಹ ಭೂಮಿಯ ನಿಜವಾದ ಬೆಲೆಯನ್ನು ಆಧರಿಸಬೇಕು, ಎಲ್ಲ ರೀತಿಯ ಸಂಪತ್ತಿನ ಮೇಲೆ ಸಹ ಮಿತಿಯನ್ನು ಹೇರುವ ಕಾನೂನುಗಳು ಜಾರಿಗೆ ಬರಬೇಕು.

## ನೀರಾವರಿ

ಮುಂದಿನ ದಶಕದಲ್ಲಿ ಎಲ್ಲ ಕೃಷಿಯೋಗ್ಯ ಭೂಮಿಗೂ ನೀರಾವರಿ ಸೌಲಭ್ಯ ದೊರಕಬೇಕು. ಸರ್ಕಾರವು ಸಣ್ಣ ಮತ್ತು ಮಧ್ಯಮ ಪ್ರಮಾಣದ ಯೋಜನೆಗಳಲ್ಲಿ ಗಮನ ಕೇಂದ್ರೀಕರಿಸಿದರೆ ಮಾತ್ರ ಇದು ಸಾಧ್ಯವಾಗುತ್ತದೆ.

## ಋಣ ವಿಮೋಚನೆ.

ಸರ್ಕಾರದ ಅವೈಜ್ಞಾನಿಕ ಬೆಲೆನೀತಿಯಿಂದಾಗಿ ರೈತರು ಹೆಚ್ಚು ಹೆಚ್ಚು ತೊತ್ತಳದುಳಿಯಲ್ಪಡುತ್ತಿದ್ದಾರೆ. ರೈತರಿಂದ ಸಾಲ ವಸೂಲು ಮಾಡಬೇಕೆಂಬುದು ಸಮಂಜಸವಲ್ಲ. ಹಾಗಾಗಿ ರೈತರಿಂದ ಬರಬೇಕಾದ ಎಲ್ಲ ಸಾಲಗಳನ್ನು ಮನ್ನಾ ಮಾಡಬೇಕು.

## ಅರಣ್ಯ

ಪಟ್ಟಣ ಪ್ರದೇಶಗಳು ಮತ್ತು ಕೈಗಾರಿಕೆಗಳಲ್ಲಿ ಮರಮುಟ್ಟುಗಳ ಬಳಕೆಯನ್ನೂ ನಿಯಂತ್ರಿಸಿದರೆ ಮಾತ್ರ ಅರಣ್ಯಗಳನ್ನು ಕಾಪಾಡಬಹುದು. ಅರಣ್ಯ ವಾಸಿಗಳಿಗೆ ಮರಮುಟ್ಟು ಮತ್ತು ಇತರೆ ಅರಣ್ಯೋತ್ಪನ್ನಗಳನ್ನು ಬಳಸಲು ಅಧಿಕಾರವಿದೆ. ಚಾಲ್ತಿಯಲ್ಲಿರುವ ಅರಣ್ಯ ಕಾಯಿದೆಗಳು ಅರಣ್ಯ ವಾಸಿಗಳ ಹಿತಾಸಕ್ತಿಗೆ ವಿರುದ್ಧವಾಗಿವೆ. ಆದ್ದರಿಂದ ಅವುಗಳನ್ನು ಈ ಕೂಡಲೇ ರದ್ದು ಮಾಡಬೇಕು.

ಅರಣ್ಯಗಳ ನಿರ್ವಹಣೆಯನ್ನು ಅರಣ್ಯ ವಾಸಿಗಳ ಮೂಲಭೂತ ಹಕ್ಕು ಎಂದು ಪರಿಗಣಿಸಬೇಕು. ಅವರ ಸಲಹೆ, ಸೂಚನೆಗಳ ಮೇರೆಗೆ ಗಿಡ ನೆಡುವ ಕೆಲಸ ನಡೆಯಬೇಕು. ಪರಿಸರಕ್ಕೆ ಹಾನಿಮಾಡುವ ಸಸ್ಯ ಪ್ರಭೇದಗಳಾದ ನೀಲಗಿರಿ ಅಕೇಷಿಯಗಳ ಸಂತತಿಯನ್ನು ನಿಷೇಧಿಸಬೇಕು.

### ನಿರುದ್ಯೋಗ

ಉತ್ಪಾದನೆಯ ನೀತಿಯಲ್ಲಿ ಮೂಲಭೂತ ಬದಲಾವಣೆಗಳು ಆಗದ ಹೊರತು ದೇಶದಲ್ಲಿನ ನಿರುದ್ಯೋಗ ಸಮಸ್ಯೆಯನ್ನು ಪರಿಹರಿಸಲು ಸಾಧ್ಯವಾಗದು. ಈಗಿನ ಉತ್ಪಾದನಾ ಕ್ರಮವು ಗ್ರಾಮಮೂಲವಾದ ಉದ್ಯೋಗದ ಮಾರ್ಗಗಳನ್ನು ನಾಶಮಾಡುತ್ತದೆ. ಇದು ಈಗಿನ ತೀವ್ರ ನಿರುದ್ಯೋಗ ಸಮಸ್ಯೆಗೆ ಮೂಲಕಾರಣವಾಗಿದೆ. ರಾಜೀವಗಾಂಧಿಯವರ ಕಂಪ್ಯೂಟರ್ ಹುಚ್ಚು ಸಮಸ್ಯೆಗಳನ್ನು ತೀವ್ರ ಸ್ವರೂಪಕ್ಕೊಯ್ದಿವೆ.

ಸಣ್ಣ ಪ್ರಮಾಣದ ಹಾಗೂ ಗ್ರಾಮೀಣ ಕೈಗಾರಿಕೆಗಳನ್ನು ಪ್ರೋತ್ಸಾಹಿಸಬೇಕು. ಸಣ್ಣ ಯಂತ್ರಗಳಿಂದ ಉತ್ಪಾದಿಸಬಹುದಾದ ವಸ್ತುಗಳನ್ನು ಉತ್ಪಾದಿಸಲು ದೊಡ್ಡಯಂತ್ರಗಳನ್ನು ಬಳಸಬಾರದು. ದಿನ ನಿತ್ಯದ ಅಗತ್ಯಗಳಿಗೆ ಬೇಕಾದ ಸಾಮಾನ್ಯ ವಸ್ತುಗಳನ್ನು ಗ್ರಾಮಾಧಾರಿತ ಕೈಗಾರಿಕೆಗಳಲ್ಲಿ ಉತ್ಪಾದಿಸುವುದರಿಂದ ಕೋಟ್ಯಾಂತರ ಜನರಿಗೆ ಉದ್ಯೋಗಾವಕಾಶಗಳನ್ನು ನಿರ್ಮಿಸಬಹುದು. ದುಡಿಮೆಗಾರರಿಗೆ ಸರ್ಕಾರವು ಕೆಲಸದ ಖಾತರಿಯನ್ನು ಒದಗಿಸಬೇಕು ಮತ್ತು ಉದ್ಯೋಗದ ಹಕ್ಕನ್ನು ಮೂಲಭೂತ ಹಕ್ಕೆಂದು ಪರಿಗಣಿಸಬೇಕು.

### ಭ್ರಷ್ಟಾಚಾರ

ಲಂಚಗುಳಿತನದ ವಿರುದ್ಧ ಆಗಿಂದಾಗ್ಗೆ ನಡೆಯುವ ಹೋರಾಟಗಳನ್ನು ಅದರ ಬೇರುಗಳನ್ನು ನಾಶಮಾಡುವಲ್ಲಿ ವಿಫಲವಾಗುತ್ತಿವೆ. ದುರ್ಗುಣಗಳು ಪ್ರತಿಯೊಬ್ಬ ಮನುಷ್ಯನಲ್ಲೂ ಒಂದಿಲ್ಲೊಂದು ಪ್ರಮಾಣದಲ್ಲಿ ಇರುತ್ತವೆಯಾದರೂ ವ್ಯಾಪಕ ಭ್ರಷ್ಟಾಚಾರಕ್ಕೆ ಅಸಮಾನತೆ, ಅಧಿಕಾರಶಾಹಿಯಲ್ಲಿ ಅಧಿಕಾರ ಕೇಂದ್ರೀಕರಣ, ಮತ್ತು ಭೋಗವಾದಿ ಸಂಸ್ಕೃತಿಯಂತಹ ಹಲವಾರು ಸಮಾಜಿಕ ಕಾರಣಗಳು ಮೂಲವಾಗಿವೆ. ಭ್ರಷ್ಟಾಚಾರವನ್ನು ಹತ್ತಿಕ್ಕಲು ಐಷಾರಾಮಿ ವಸ್ತುಗಳು ಉತ್ಪಾದನೆಯಾಗುವುದನ್ನು ತಡೆಯಬೇಕು. ಸಾಮಾನ್ಯ ಪ್ರಜೆಗಳ ಬದುಕಿನಲ್ಲಿ ಸಮಾನತೆ ಬೆಳೆಯಬೇಕು. ಅಧಿಕಾರ ವಿಕೇಂದ್ರಿಕರಣವಾಗಬೇಕು. ಭ್ರಷ್ಟಾಚಾರವನ್ನು ಹಿಡಿತಕ್ಕೆ ತರುವಲ್ಲಿ ಈಗಿನ ನಿಷ್ಪ್ರಯೋಜಕ ಚುನಾವಣಾ ಪದ್ಧತಿಯನ್ನು ಬದಲಿಸುವುದು ಕೂಡ ಅಗತ್ಯ.

### ಬಹುರಾಷ್ಟ್ರೀಯ ಸಂಸ್ಥೆಗಳು

ಬಹುರಾಷ್ಟ್ರೀಯ ಕಂಪನಿಗಳು ಅಯೋಗ್ಯ ಮತ್ತು ಹಳಸಲು (Out dated) ತಂತ್ರಜ್ಞಾನವನ್ನು ಮಾರಾಟಮಾಡುತ್ತವೆ. ಸಾಮಾಜಿಕ ಅಸಮಾನತೆ, ಭೋಗವಾದಿ ಸಂಸ್ಕೃತಿ ಮತ್ತು ಭ್ರಷ್ಟಾಚಾರಗಳನ್ನು ಹರಡುವುದರಿಂದ ಇವನ್ನು ತೊಲಗಿಸಬೇಕು.

### ಬೆಲೆಏರಿಕೆ

ಸರ್ಕಾರದ ಅಸಮರ್ಪಕ ಆರ್ಥಿಕ ನೀತಿ, ನಿರಂತರ ಬೆಲೆಯೇರಿಕೆಗೆ ಕಾರಣಗಳಾಗಿವೆ. ಖೋತಾಬಜೆಟ್ ಮಂಡನೆ, ಅನುತ್ಪಾದಕ ವೆಚ್ಚದ ಹೆಚ್ಚಳ, ಕಪ್ಪುಹಣದ ವ್ಯಾಪಕ ಅಸ್ತಿತ್ವ ಇತ್ಯಾದಿಗಳು ಬೆಲೆ ನಿಯಂತ್ರಣವನ್ನೂ ದುಸ್ಸಾಧ್ಯವಾಗಿಸಿದೆ. ಆದ್ದರಿಂದ ಈಗಿನ ಆರ್ಥಿಕ ನೀತಿಯನ್ನು ಸರಿಪಡಿಸಿಕೊಳ್ಳಬೇಕು.

ಕಾರ್ಖಾನೆಗಳಲ್ಲಿ ಉತ್ಪಾದಿಸಲಾದ ವಸ್ತುಗಳ 1986 ರ ಡಿಸೆಂಬರ್‌ನ ಬೆಲೆಗಳನ್ನು ಸರ್ಕಾರವು ಉದ್ಘೋಷಿಸಿ ನಂತರದ ಬೆಲೆಯೇರಿಕೆಯನ್ನು ತೆಗೆದು ಹಾಕಬೇಕು. ಇನ್ನು ಮುಂದೆ ಸರ್ಕಾರವು ಕಾರ್ಖಾನೆಗಳಲ್ಲಿ ಉತ್ಪಾದಿಸಲ್ಪಡುವ ವಸ್ತುಗಳ ಬೆಲೆಗಳನ್ನು ನಿಷ್ಕರ್ಷೆ ಮಾಡಬೇಕು. ವರ್ತಕರಿಗೆ ಬೆಲೆ ಏರಿಸಲು ಅವಕಾಶವಿರಬಾರದು.

### ಶಿಕ್ಷಣ

ಮೇಲ್ವರ್ಗದ ಸಂಸ್ಕೃತಿಯನ್ನು ಹೇರುವ ನವೋದಯ ಶಾಲೆಗಳು ಮತ್ತು ಹೊಸ ಶಿಕ್ಷಣ ನೀತಿಯನ್ನು ಸರ್ಕಾರ ಕೂಡಲೆ ಕಿತ್ತೊಗೆಯಬೇಕು. ಶಿಕ್ಷಣಕ್ಕೆ ಆಯವ್ಯಯ ಪತ್ರದಲ್ಲಿ ಹೆಚ್ಚಿನ ಅವಕಾಶಗಳನ್ನು ಒದಗಿಸಬೇಕು. ಪ್ರೌಢಶಾಲೆಗಳ ತನಕ ಉಚಿತ ಶಿಕ್ಷಣ ದೊರೆಯಬೇಕು. ವಸತಿ ಶಾಲೆಗಳ ಅನುಕೂಲತೆಯನ್ನು ಬಡವಿದ್ಯಾರ್ಥಿಗಳಿಗೆ ದೊರಕಿಸಬೇಕು.

### ರಕ್ಷಣೆ

ಶಸ್ತ್ರಾಸ್ತ್ರಗಳ ಖರೀದಿಯಲ್ಲಿ ಅವ್ಯವಹಾರ ನಡೆಸುವವರನ್ನು ಶಿಕ್ಷಿಸಬೇಕು. ಇಂತಹ ಕಾರಸ್ಥಾನಗಳನ್ನು ಜನರ ಮುಂದಿಡಬೇಕು. ಈ ಸಂಬಂಧದಲ್ಲಿ ಕಂಡುಬಂದಿರುವ ಅವ್ಯವಹಾರಗಳನ್ನು ಗಮನಿಸಿದಾಗ ಹೆಚ್ಚಿನ ರಕ್ಷಣಾ ವೆಚ್ಚವು ಅನಗತ್ಯವಾದುದೆಂದು ತೋರುತ್ತದೆ. ರಕ್ಷಣಾ ವೆಚ್ಚಗಳನ್ನು ಕಡಿಮೆಮಾಡಿ ಜನಸಮುದಾಯದ ಯೋಗಕ್ಷೇಮಕ್ಕೆ ಹೆಚ್ಚು ಹಣ ಖರ್ಚುಮಾಡಬೇಕು.

### ಮತೀಯ ಗಲಭೆಗಳು ಮತ್ತು ಸಾಮಾಜಿಕ ಅಪರಾಧಗಳು

ಕಳೆದ ನಲವತ್ತು ವರ್ಷಗಳಲ್ಲಿ ಹೆಚ್ಚುತ್ತಲೇ ಬರುತ್ತಿರುವ ಮತೀಯ ಗಲಭೆಗಳು ಹಾಗೂ ಸಾಮಾಜಿಕ ಅಪರಾಧಗಳು ನೌಕರಶಾಹಿ ಮತ್ತು ಸರ್ಕಾರಗಳ ಪ್ರತಿಗಾಮಿ ಧೋರಣೆಗೆ ಸಾಕ್ಷಿಯಾಗಿವೆ.

(ಅ) ನೌಕರಶಾಹಿಯ ಒಳಗಿನ ಮತೀಯ ಹಾಗೂ ಜಾತಿವಾದಿ ಶಕ್ತಿಗಳನ್ನು ಮೂಲೋತ್ಪಾಟಿಸಬೇಕು.

(ಆ) ಯಾವುದೇ ಪ್ರದೇಶದಲ್ಲಿ ಮತೀಯ ಗಲಭೆಗಳಿಂದ ಅಥವಾ ಸಾಮಾಜಿಕ ವಿದ್ರೋಹಗಳಿಂದ ಸಾವು ನೋವುಂಟಾದಲ್ಲಿ ಆ ಜಿಲ್ಲೆಯ ಡಿಸ್ಟ್ರಿಕ್ ಮ್ಯಾಜಿಸ್ಟ್ರೇಟರ ಮೇಲೆ ನೈತಿಕ ಹೊಣೆ ಹೊರಿಸಿ ಅನಾಮತ್ತುಗೊಳಿಸಬೇಕು. ತೊಂದರೆಗೀಡಾದ ಕುಟುಂಬಗಳಿಗೆ ಸಾಕಷ್ಟು ಪರಿಹಾರ ದೊರಕಬೇಕು.

(ಇ) ಮತೀಯ ಗಲಭೆಗಳು ಮತ್ತು ಸಾಮಾಜಿಕ ಅಪರಾಧ ಎಸಗಿದವರ ವಿಚಾರಣೆ ನಡೆಸಲು ವಿಶೇಷ ನ್ಯಾಯಾಲಯಗಳನ್ನು ಸ್ಥಾಪಿಸಬೇಕು. ಇಂತಹ ವ್ಯಕ್ತಿಗಳಿಗೆ ಶಸ್ತ್ರಾಸ್ತ್ರ ಪರವಾನಗಿ ನೀಡಿದ್ದರೆ ಕಿತ್ತುಕೊಳ್ಳಬೇಕು.

(ಈ) ಇಂಥ ಅಪರಾಧಿಗಳ ಮತದಾನದ ಹಕ್ಕನ್ನು ಕಿತ್ತುಕೊಳ್ಳಬೇಕು.

ಇಂತಹ ಶಿಕ್ಷೆಯನ್ನು ಮಂತ್ರಿಗಳು, ಶಾಸಕರು ಹಾಗೂ ಪಾರ್ಲಿಮೆಂಟ್ ಸದಸ್ಯರ ಮೇಲೆ ಕೂಡ ಹೇರಬೇಕು. ಏಕೆಂದರೆ ಇತ್ತೀಚಿನ ವರ್ಷಗಳಲ್ಲಿ ಇಂತಹ ಅಪರಾಧಗಳನ್ನೆಸಗಿದ ಖೂಳರೂ ಚುನಾವಣೆಗಳನ್ನು ಗೆದ್ದದ್ದುಂಟು.

### ಅಸಂಘಟಿತ ಕಾರ್ಮಿಕ

ಅಸಂಘಟಿತ ಕ್ಷೇತ್ರದಲ್ಲಿ ಕನಿಷ್ಟ ವೇತನದ ಬೇಡಿಕೆಯನ್ನು ಅನುಷ್ಠಾನಕ್ಕೆ ತರುವಲ್ಲಿ ಇನ್ನೂ ಪರಿಣಾಮ ನೀತಿಯನ್ನು ಅನುಸರಿಸಬೇಕು. ಸರ್ಕಾರವೇ ಉದ್ಯೋಗದಾತನಾಗಿದ್ದಲ್ಲಿ ಅದು ನಾಲ್ಕನೆಯ ದರ್ಜೆಯ ಸರ್ಕಾರಿ ನೌಕರರಿಗೆ ಕೊಡುವಷ್ಟು ಕನಿಷ್ಟ ವೇತನವನ್ನು ಇಂಥ ಕಾರ್ಮಿಕರಿಗೆ ಕೊಡಬೇಕು. ಸರ್ಕಾರವು ತಾನು ಹಳ್ಳಿಗಾಡಲ್ಲಿ ಉದ್ಯೋಗಕ್ಕೆ ತೆಗೆದುಕೊಳ್ಳುವ

(16ನೇ ಪುಟಕ್ಕೆ)

ಲಕ್ಷ್ಮಣನಾಯಕನ ಕೊಲೆ

# ಕೊಲೆಗಡುಕ ಜನತಾಪಕ್ಷವೇ ನೀನೇ ಹೊಣೆ

ಬಿಸಿಲು ಇಳಿದಿದೆ; ಕೂಲಿ ಜನ ಮನೆಗೆ ಹಿಂತಿರುಗಿದ್ದಾರೆ; ಕೆಲವು ಗುಡಿಸಲುಗಳಲ್ಲಿ ಬೆಳಕು ಕಾಣುತ್ತಿದೆ; ಹೊಗೆ ಏಳುತ್ತಿದೆ.

ಪಕ್ಕದ ಪಟ್ಟಣದ ಸರ್ಕಾರಿ ನೌಕರ, ಫಾರೆಸ್ಟ್ ಕಂಟ್ರಾಕ್ಟರ್ ಲೇವಾದೇವಿ ಮಾರವಾಡಿ, ಪುಟಗೋಸಿ ರಾಜಕೀಯ ಪುಢಾರಿ, ಪೊಲೀಸ್ ಪೇದೆ ಅಥವಾ ಇನ್ನಾರೋ....ದಲಿತ ಕೇರಿಗೆ ಬರುತ್ತಾರೆ, ಒಂದು ಮನೆ ಬಾಗಿಲು ಒದ್ದು ತಳ್ಳುತ್ತಾರೆ, ಮನೆಯೊಳಗಿನ ಒಬ್ಬೊಬ್ಬ ಮಹಿಳೆಯ ತಲೆ ಮೇಲಿನ ಸೆರಗಮುಸುಕೆಳೆದು ನೋಡುತ್ತಾರೆ, ಮಾಸಿದ ಲಂಗವುಟ್ಟ ಹುಡುಗಿಯರನ್ನೂ ಅವರು ಬಿಡುವುದಿಲ್ಲ, ತಮಗಿಷ್ಟ ಬಂದರೆ ಒಬ್ಬರನ್ನೋ, ಇಬ್ಬರನ್ನೋ, ಮೂವರನ್ನೋ, ಎಳೆದೊಯ್ಯುತ್ತಾರೆ.

ಮಾರನೇ ದಿನ ಬೆಳಿಗ್ಗೆ ಕೇರಿಗೆ ಹಿಂತಿರುಗುವ ದಲಿತ ಮಹಿಳೆಯ ಸೀರೆ ಅಸ್ತವ್ಯಸ್ತವಾಗಿದೆ, ಆಕೆಯ ಮುಖದಲ್ಲಿ ನೋವು ಮಡುಗಟ್ಟಿದೆ; ಮುಖ, ಕುತ್ತಿಗೆ ಮೇಲೆ ಪರಚಿದ, ಕಚ್ಚಿದ ಗಾಯಗಳಾಗಿವೆ, ಆಕೆ ಕಾಮುಕವ್ಯಾಘ್ರದ ಶಿಕಾರಿಯಾಗಿ ಈಗ ಕಾಲೆಳೆಯುತ್ತ ಹಿಂತಿರುಗುತ್ತಿದ್ದಾಳೆ,

ಇನ್ನೊಂದು ಹಳ್ಳಿ. ದಲಿತರು ಯಾರೂ ಬಿಟ್ಟಿ ದುಡಿಯಬೇಕಿಲ್ಲ; ತಮ್ಮ ಮನೆ ಹೆಂಗಸರು-ಹುಡುಗಿಯರನ್ನು ಕಾಮುಕ ವ್ಯಾಘ್ರಗಳಿಗೆ ಬಲಿ ಕೊಡಬೇಕಿಲ್ಲ; ಸಾಗುವಳಿ ಮಾಡುತ್ತಿರುವ ಜಮೀನು ಪಡೆಯಲು ತಾಲೂಕು ಕಚೇರಿಯಲ್ಲಿ ಅರ್ಜಿ ಸಲ್ಲಿಸಲಿ; ಸರ್ಕಾರದಿಂದ ಬರಬೇಕಾದ ಸೌಲಭ್ಯಗಳನ್ನು ಆಗ್ರಹದಿಂದ ಪಡೆಯಲಿ.... ಎಂದೆಲ್ಲ ದಲಿತ ಯುವಕ ಹೇಳುತ್ತಾನೆ. ತನ್ನ ಹಳ್ಳಿ ಮತ್ತು ಸುತ್ತಮುತ್ತಲ ಹಳ್ಳಿಗಳ ದಲಿತರ ಬದುಕಿಗೆ ಹೊಸ ತಿರುವು ನೀಡುತ್ತಾನೆ. ಹಿಂಜರಿದ ದಲಿತರನ್ನು ತಾನೇ ಸರ್ಕಾರಿ ಕಚೇರಿಗೆ ಕರೆದೊಯ್ದು ಸೌಲಭ್ಯ ದೊರಕಿಸಿ ಕೊಡುತ್ತಾನೆ. ಇದೆಲ್ಲ ಎಷ್ಟು ಕಾಲ ? ಈ ದಲಿತ ಯುವಕ ಸ್ವಾಭಿಮಾನಿ ಚಳವಳಿಯ ನಾಯಕನಾಗುತ್ತ ಹೋದಂತೆಲ್ಲ, ಎದೆಯಲ್ಲಿ ಮಡುಗಟ್ಟುತ್ತ ಹೋಗುವ ವಿಷವನ್ನು ಕಾರಿದರು.

ದಲಿತ ಯುವಕನ ಹೆಣ ಹಳ್ಳಿಯ ಮಧ್ಯಭಾಗದ ರಸ್ತೆಯಲ್ಲಿ ಬಿತ್ತು; ಅವನ ಹಿಂದೆ ತಿರುಗಾಡುತ್ತಿದ್ದ ಇನ್ನೂ ಒಂದಿಬ್ಬರ ಹೆಣಗಳೂ ಕೂಡ ಉರುಳಿದ್ದವು.

ಇದೆಲ್ಲ ಯಾವುದೋ ಕಾಲದ ಕತೆಗಳಲ್ಲ; ಇಂಥ ನೂರಾರು ಘಟನೆಗಳು ಬಿಹಾರ, ಉತ್ತರ ಪ್ರದೇಶ, ಮಧ್ಯಪ್ರದೇಶಗಳಲ್ಲಿ ದಿನನಿತ್ಯ ನಡೆಯುತ್ತಿವೆ. ಅವುಗಳಲ್ಲಿ ಬಹುಪಾಲು ಪೊಲೀಸ್ ಠಾಣೆಗಳಲ್ಲಿ ದಾಖಲಾಗುವುದೇ ಇಲ್ಲ.

## ಜನತಾಪಕ್ಷವೇ ನೀನಿನ್ನೂ ಬದುಕಿದ್ದೀಯಾ?

ವಡಗೇರಾ ಸುತ್ತಮುತ್ತ ದಲಿತ ವರ್ಗಗಳ ಸ್ವಾಭಿಮಾನಕ್ಕೆ ಸಂಕೇತವಾಗಿದ್ದ ಲಕ್ಷ್ಮಣ ನಾಯಕನ ಕೊಲೆ ದಿಢೀರನೆ ನಡೆದದ್ದಲ್ಲ. ಬಸವರಾಜಪ್ಪ ಸಾಹ್ಕಾರ ಮತ್ತು ಅವರ ಗುಂಪು ಕನಿಷ್ಠ ಇಪ್ಪತ್ತು ಬಾರಿಯಾದರೂ ಅವರಿಗೆ ಕೊಲೆ ಬೆದರಿಕೆ ಹಾಕಿತ್ತು.

ಲಕ್ಷ್ಮಣ ನಾಯಕ ತನ್ನ ಕೊಲೆಯಾಗಬಹುದೆಂದು ಎಲ್ಲಾ ಅಧಿಕಾರಿಗಳಿಗೂ ಮೊದಲೇ ದೂರು ನೀಡಿದ್ದ. ಎಲ್ಲಾ ಜನತಾ ಪಕ್ಷದ ಸಭೆಯಲ್ಲೂ ಹೇಳಿದ್ದ. ಮುಖ್ಯಮಂತ್ರಿ ರಾಮಕೃಷ್ಣ ಹೆಗಡೆ, ರಾಜ್ಯ ಜನತಾದ ಹೊಸ ಅಧ್ಯಕ್ಷ ಎಂ. ಪಿ. ಪ್ರಕಾಶ್ ಆದಿಯಾಗಿ ಎಲ್ಲರಲ್ಲೂ ತನ್ನ ಅಳವಳ ತೋಡಿಕೊಂಡಿದ್ದ. ಬಸವರಾಜಪ್ಪ ಸಾಹ್ಕಾರನ ನೂರಾರು ಅನ್ಯಾಯ, ದೌರ್ಜನ್ಯಗಳನ್ನು ಪಕ್ಷದ ಗಮನಕ್ಕೆ ತಂದು, ಅವರ ಹಿಂದೆ ಮಾಜಿ ಮಂತ್ರಿ ಮುದ್ನಾಳ ಇರುವುದನ್ನೂ ಹಲವರ ಬಳಿ ಹೇಳಿಕೊಂಡಿದ್ದ.

ಆದರೆ ಏನಾಯಿತು? ಆಗಬಹುದು ಎಂದು ಊಹಿಸಿದ್ದೂ ಆಗಿ ಹೋಯಿತು.

ಈಗ ಉತ್ತರ ಹೇಳುವವರು ಯಾರು? ಜನತಾ ದುರೀಣರ ಆತ್ಮಸಾಕ್ಷಿ ಎಲ್ಲಿದೆ? ಮೌಲ್ಯಾಧಾರಿತ ಸರ್ಕಾರವೇ ನೀನಿನ್ನೂ ಬದುಕಿದ್ದೀಯಾ?

ಇದೇ ಬಗೆಯಲ್ಲಿ ಗುಲ್ಬರ್ಗಾ ಜಿಲ್ಲೆಯ ವಡಗೇರಾ ಗ್ರಾಮದಲ್ಲಿ ದಲಿತ ನಾಯಕನೊಬ್ಬನ ಕಗ್ಗೊಲೆ ನಡೆಯಿತು.

ಲಕ್ಷ್ಮಣ ನಾಯಕ್, ಗುಲ್ಬರ್ಗಾ ಜಿಲ್ಲಾ ಪರಿಷತ್‌ಗೆ ಜನತಾ ಪಕ್ಷದಿಂದ ಚುನಾಯಿತನಾದ ಯುವಕ. 1983 ರಲ್ಲಿ ಕಾಂಗ್ರೆಸ್‌ನಿಂದ ಜನತಾ ಪಕ್ಷಕ್ಕೆ ಬಂದರೂ ಲಕ್ಷ್ಮಣ ನಾಯಕ್‌ಗೆ ಯಾವುದೇ ಪಕ್ಷದ ನಾಯಕನೆಂಬ ಹಣೆಪಟ್ಟಿಯಿಲ್ಲ. ಆತ ಲಂಬಾಣಿ ಜನಾಂಗದಿಂದ ಮೂಡಿ ಬಂದ ದುರ್ಬಲವರ್ಗದ ನಾಯಕ, ಗೌಡರ ಗತ್ತಿಗೆ ವಿರುದ್ಧವಾಗಿ ಸ್ವಾಭಿಮಾನದಿಂದ ಎದೆ ಸೆಟೆಸಿ ನಿಂತ ಸಂಘಟಕ.

ಲಕ್ಷ್ಮಣ ನಾಯಕ ಶಹಾಪೂರ ತಾಲೂಕಿನ ಎಳೆಸೂಗೂರು ತಾಂಡಾವಾಸಿ. ದಶಕದ ಹಿಂದೆಯೇ ಆತ ತನ್ನ ಜನಾಂಗವೂ ಸೇರಿದಂತೆ ಇತರ ದುರ್ಬಲ ವರ್ಗಗಳನ್ನು ಋಣದಿಂದ ವಿಮೋಚನೆಗೊಳಿಸಲು ಪಣತೊಟ್ಟು ಕ್ರಿಯಾಶೀಲನಾದ, ಸಾಗುವಳಿ ಮಾಡುತ್ತಿದ್ದ ಭೂರಹಿತ ದಲಿತರು ಮತ್ತು ದುರ್ಬಲ ವರ್ಗದವರಿಂದ ಭೂಸುಧಾರಣಾ ನಿಯಮಗಳ ಮೇರೆಗೆ ಅರ್ಜಿ ಕೊಡಿಸಿ ಭೂಮಿ ಮಂಜೂರು ಮಾಡಿಸಿದ, ಪಾಳೆಯಗಾರಿ ಪಳೆಯುಳಿಕೆಗಳಿನ್ನೂ ಜೀವಂತ ಇರುವ ಈ ಭಾಗದಲ್ಲಿ ಲಕ್ಷ್ಮಣ ನಾಯಕ ನಿಜವಾದ ಹೀರೋ ಆದ, ತಮ್ಮ ಊರಿನ ಶ್ರೀಮಂತ ಚೆನ್ನಾರೆಡ್ಡಿ ಪಾಟೀಲರ ಅಹಂಕಾರ ಮುರಿದ ನಂತರವಂತೂ ಆತನ ಸುತ್ತ ಅಭೂತಪೂರ್ವ ಪ್ರಭಾವ ಬೆಳೆದಿತ್ತು. ಲಕ್ಷ್ಮಣ ನಾಯಕನ ಛಲ ಎಷ್ಟೊಂದು ಎಂದರೆ ಅಗತ್ಯ ಬಿದ್ದಾಗ ಚೆನ್ನಾರೆಡ್ಡಿ ಪಾಟೀಲನ ವಿರುದ್ಧ, ಅವರಂಥದೇ ಕೂಟ ಕಟ್ಟಲೂ ಆತ ಹಿಂಜರಿಯಲಿಲ್ಲ. ಹಾಗಾಗಿಯೇ ಚೆನ್ನಾರೆಡ್ಡಿ ಪಾಟೀಲನನ್ನು ಗೂಂಡಾ ಕಾಯ್ದೆ ಮೇರೆಗೆ ಜಿಲ್ಲೆಯಿಂದ ಗಡೀಪಾರು ಮಾಡಿದಾಗ, ಲಕ್ಷ್ಮಣ ನಾಯಕನನ್ನೂ ಕೂಡ ಗಡೀಪಾರು ಮಾಡಲಾಗಿತ್ತು.

ಎಳೆಸೂಗೂರು ತಾಂಡಾಕ್ಕೆ 12 ಕಿ. ಮೀ. ದೂರದ ವಡಗೇರಾ ಆ ಭಾಗದ ಪ್ರಮುಖ ಪಟ್ಟಣ. ಪೊಲೀಸ್ ಠಾಣೆಯಿರುವುದೂ ಇಲ್ಲಿಯೇ, ಮಂಡಲ ಪಂಚಾಯತ್ ಕೇಂದ್ರವೂ ವಡಗೇರಾ ಆಯಿತು. ಆತನಕ ಆ ಊರಿನಲ್ಲಿ ತಲೆಮಾರುಗಳಿಂದ ಗೌಡಿಕೆ ನಡೆಸಿ ಕೊಂಡು ಬಂದಿದ್ದ ಭೂಮಾಲೀಕ ಬಸವ ರಾಜಪ್ಪ, ಲಕ್ಷ್ಮಣ ನಾಯಕ ವಡಗೇರಾ ಭಾಗದ ನಾಯಕ

## ಇತ್ತೀಚಿನ ಬಲಿ

(ಹಿಂದಿನ ಪುಟದಿಂದ)

ದಾದ ಸಂಗತಿ. ಈ ಮಧ್ಯೆ ಪೊಲೀಸರು ಬಂದು ನೇತಾಡುವ ಹೆಣದ ಮಹಜರು ನಡೆಸಿ ಹೋಗಿದ್ದಾರೆ.

ಮಂಡಲ ಪ್ರಧಾನನ ದಬ್ಬಾಳಿಕೆ ಪ್ರತಿಭಟಿಸಿ ನೊಂದವರಿಗೆ ನ್ಯಾಯಕ್ಕಾಗಿ ಚನ್ನಗಿರಿ ದ. ಸಂ ಸ. 20-11-87 ರಂದು ಗೊಪ್ಪೇನಹಳ್ಳಿಯಿಂದ ಚನ್ನಗಿರಿಗೆ ಕಾಲ್ನಡಿಗೆ ಜಾಥಾ ಏರ್ಪಡಿಸಿತ್ತು. ಈ ಕಾಲ್ನಡಿಗೆಯಲ್ಲಿ ಮಂಡಲ ಪ್ರಧಾನನನ್ನು ವಜಾ ಮಾಡಬೇಕೆಂದು ಒತ್ತಾಯಿಸಲಾಯಿತು.

ಅಧಿಕಾರಿಗಳು ಪೊಲೀಸರು ಗೊಪ್ಪೇನಹಳ್ಳಿಯಲ್ಲಿ 144ನೇ ಸೆಕ್ಷನ್ ಜಾರಿಗೊಳಿಸಿ ಸಭೆ ನಡೆಯದಂತೆ ತಡೆದರು. ಆದರೂ ಕಾಲ್ನಡಿಗೆಯಲ್ಲಿ ಬಂದಿದ್ದ ದ. ಸಂ. ಸ. ಕಾರ್ಯಕರ್ತರನ್ನು, ಗ್ರಾಮಸ್ಥರನ್ನು ಉದ್ದೇಶಿಸಿ ರಾಜ್ಯ ಸಂಚಾಲಕ ಬಿ. ವಿ. ಚಂದ್ರಪ್ರಸಾದ ತ್ಯಾಗಿ ಮತ್ತು ಭದ್ರಾವತಿಯ ಹಿರಿಯ ಕಾರ್ಯಕರ್ತ ಎನ್. ಗಿರಿಯಪ್ಪ ದಬ್ಬಾಳಿಕೆ ಖಂಡಿಸಿ ಮಾತನಾಡಿದರು. ಕೊಲೆಯ ಆರೋಪಿ ಶೇಖರಪ್ಪನ ಗೂಂಡಾ ಗುಂಪು ರಾಜಾರೋಷವಾಗಿ ಓಡಾಡಿಕೊಂಡು ದಾಂದಲೆ ಮಾಡುತ್ತಿದ್ದರು. ಕಾನೂನಿನ ಹೆಣ ಕಾಯುತ್ತಿದ್ದ ಪೊಲೀಸರು ಮೌನವಾಗಿ ಮೋಜು ನೋಡುತ್ತಿದ್ದರು.

ಗೊಪ್ಪೇನಹಳ್ಳಿಯಿಂದ ಹೊರಟ ದ.ಸಂ. ಸ. ಜಾಥಾ ಚನ್ನಗಿರಿಗೆ ಬಂತು. ತಾಲೂಕು ಕಛೇರಿ ಆವರಣದಲ್ಲಿ ಬಹಿರಂಗ ಸಭೆ ಪ್ರಾರಂಭಿಸುತಿದ್ದಂತೆ ಸಭೆಯಲ್ಲಿ ತ್ಯಾಗಿ, ಗಿರಿಯಪ್ಪ, ದೇವನೂರು ಮಹಾದೇವ ಭಾಗವಹಿಸಿದ್ದರು. ದೇವನೂರು ಮಹಾದೇವ ಮಾತಾಡಲು ಪ್ರಾರಂಭಿಸಿದೊಡನೆ ಜನತಾ ಪಕ್ಷದ 5-6 ಜನ ದುರಳರು ವೇದಿಕೆಯತ್ತ ನುಗ್ಗಿ ಮೈಕ್ ಕಿತ್ತುಹಾಕಿ ದ. ಸಂ. ಸ. ಕಾರ್ಯಕರ್ತ ಸಿದ್ದಪ್ಪನ ಮೇಲೆ ಹಲ್ಲೆ ನಡೆಸಿದರು.

ಇಷ್ಟೆಲ್ಲ ನಡೆಯುವಾಗ ನೂರಾರು ಜನ ಪೊಲೀಸರು ಹತ್ತಾರು ಜನ ಅಧಿಕಾರಿಗಳು ಮೌನವಾಗಿ ನಿಂತಿದ್ದು ಕೂಡಲೆ 144ನೇ ಸೆಕ್ಷನ್ ಜಾರಿಗೊಳಿಸಿ ಸಭೆಯನ್ನೇ ತಡೆದರು.

ಜನತಾ ಪಕ್ಷ ಬೊಗಳೆ ಹೊಡೆಯುವ ಮೌಲ್ಯಾಧಾರಿತ, ಪ್ರಜಾ ಸತ್ತಾತ್ಮಕ ಮಾತುಗಳು ಅಲ್ಲಿ ಪೊಲೀಸರ, ಗೂಂಡಾಗಳ ಬೂಟು ನೆಕ್ಕುತ್ತಿದ್ದವು. ಸಚಿವ ಜೆ. ಎಚ್. ಪಟೇಲರ ಆಳ್ವಿಕೆಯ ಚನ್ನಗಿರಿ ತಾಲೂಕಿನ ಈ ಹಳ್ಳಿ ಮೀಸಲು ಸಚಿವ ಜಿ. ಬಸವಣ್ಣಪ್ಪನವರ ಕ್ಷೇತ್ರಕ್ಕೆ ಸೇರಿದೆ. ಈ ಇಬ್ಬರು ಸಮಾಜವಾದಿ ಮುಖವಾಡದ ಸಚಿವರ ಆಳ್ವಿಕೆಯಲ್ಲಿ ಪ್ರಬಲ ಜಾತಿಗಳು ದೈತ್ಯ ಶಕ್ತಿಯಾಗಿ ರೂಪುಗೊಂಡಿದ್ದು ದಲಿತರು, ಅಲ್ಪ ಸಂಖ್ಯಾತರು ದಿಕ್ಕು ದೆಸೆಯಿಲ್ಲದೆ ಕಂಗಾಲಾಗಿದ್ದಾರೆ. ಉಳ್ಳವರ ಧೂರ್ತ ದಬ್ಬಾಳಿಕೆಯ ಸಂಕೋಲೆಯಲ್ಲಿ ಸಿಕ್ಕಿ ನಲುಗುತ್ತಿದ್ದಾರೆ. ಇದನ್ನೆಲ್ಲಾ ನೋಡಿಯೂ ಮೌನ ತಾಳಿರುವ ಸಚಿವದ್ವಯರು ಅಧಿಕಾರ ವಿಕೇಂದ್ರೀಕರಣದ ಹೆಸರಿನಲ್ಲಿ ಪ್ರಜಾತಂತ್ರಕ್ಕೆ ಚಪ್ಪಲಿ ಪ್ರಹಾರವಾಗುತ್ತಿದ್ದರೂ ಇವರು ಬಾಯಿ ಬಿಡುತ್ತಿಲ್ಲ. ಜನತಾ ಪಕ್ಷದ ಆತ್ಮ ಸಾಕ್ಷಿಯೇ ನೀನು ಯಾವ ಸುಡುಗಾಡಿನಲ್ಲಿ ಬೇವರ್ಸಿ ಹೆಣವಾಗಿದ್ದೀಯಾ ?

—ಸಿ. ಟಿ. ಕುಟಿಯ.

ತೆರೆದ-ಅಂಚೆ

ಇವರಿಗೆ

## ಭಾರತದ ಬೌದ್ಧಿಕ ದಾರಿದ್ರ್ಯ

(10ನೇ ಪುಟದಿಂದ)

ಅವರ ವಿಚಾರಗಳಲ್ಲಿ ಒಂದಂಗುಲದಷ್ಟೂ ಬೆಳವಣಿಗೆ ಎಂಬುದಿಲ್ಲ. ಗಾಂಧೀತತ್ವ ಎನ್ನುವ ಮಾತು ಬಳಕೆಯಲ್ಲಿದೆ. ನಿಜವಾಗಿ ಹೇಳುವುದಾದರೆ ಈ ಪರಿಕಲ್ಪನೆಗೆ ಅಸ್ತಿತ್ವವೇ ಇಲ್ಲ. ತನ್ನ ವಿಚಾರಗಳನ್ನು ಶಿಸ್ತುಬದ್ಧಗೊಳಿಸುವುದರ ಜೊತೆಗೆ ಈ ಪ್ರಕ್ರಿಯೆಯಲ್ಲಿ ಒಬ್ಬ ತತ್ವಜ್ಞಾನಿಯು ವಿಜ್ಞಾನದ ಅದುವರೆಗಿನ ಎಲ್ಲ ಸಂಶೋಧನೆಗಳನ್ನು ಮತ್ತು ಇತರ ಜ್ಞಾನಕ್ಷೇತ್ರಗಳಲ್ಲಿ ಆಗಿರುವ ಪ್ರಗತಿಯನ್ನು ಗಮನಿಸಲೇಬೇಕಾಗುತ್ತದೆ. ಈ ದೃಷ್ಟಿಯಿಂದ ನೋಡಿದರೆ ಗಾಂಧಿಯನ್ನು ಕ್ರಮಬದ್ಧ ಚಿಂತಕನೆಂದು ಕರೆಯುವುದು ಸಾಧ್ಯವಿಲ್ಲ. ಗಾಂಧಿಗೆ ಕೆಲವು ನಂಬಿಕೆಗಳು, ಸಂಪ್ರದಾಯಗಳು ಹಾಗೂ ಕೆಲವು ಗೀಳುಗಳಿದ್ದವು. ಕೆಲವನ್ನು ಹಿಂದೂ, ಜೈನ ಹಾಗೂ ಕ್ರೈಸ್ತ ಧರ್ಮಗಳಿಂದ ಸ್ವೀಕರಿಸಿದ್ದರು. ಇನ್ನು ಕೆಲವನ್ನು ಥೋರೋ, ಟಾಲ್‌ಸ್ಟಾಯ್, ರಸ್ಕಿನ್, ಮತ್ತು ಎಡ್ವರ್ಡ್ ಕಾರ್ಪೆಂಟರ್ ಅವರಿಂದ ಅಳವಡಿಸಿಕೊಂಡಿದ್ದರು. ಭಗವದ್ಗೀತೆಯಲ್ಲಿ ಕಾಣುವಂತೆ ಇವರಲ್ಲೂ ಕೂಡ ವಿಚಾರಗಳು ಕಲಸುಮೇಲೋಗರವಾಗಿವೆ. ಗೀತೆಯನ್ನು ಅತ್ಯುತ್ಕೃಷ್ಟ ಪವಿತ್ರ ಗ್ರಂಥವೆಂದು ಬಗೆಯಲು ಆದರ ಏಳುನೂರಕ್ಕೂ ಮಿಕ್ಕ ಶ್ಲೋಕಗಳಲ್ಲಿ ತಮ್ಮ ಬೌದ್ಧಿಕ ಮಟ್ಟದ ಪ್ರತಿಬಿಂಬವನ್ನೆಲ್ಲ ಅವರು ಕಾಣುತ್ತಿದ್ದರು ಎನ್ನುವುದು ಕೂಡ ಒಂದು ಕಾರಣ.

(ಮುಂದುವರೆಯುವುದು)

## ಎಲ್ಲಿ ತಪ್ಪಿದೆ ? ಏನು ಮಾಡಬೇಕು ?

(13ನೇ ಪುಟದಿಂದ)

ಜನರ ದಾಖಲೆಯನ್ನಿಟ್ಟು – ಅಸ್ವಾಭಾವಿಕವಾಗಿ ಸಾವನ್ನಪ್ಪುವ ಕಾರ್ಮಿಕರ ಕುಟುಂಬಕ್ಕೆ ಪರಿಹಾರವನ್ನೂ ಕೊಡಬೇಕು. ಐವತ್ತು ವರ್ಷ ಮೀರಿದ ವೃದ್ಧರಿಗೆ ನಿವೃತ್ತಿ ವೇತನ, ವಸತಿಹೀನರಿಗೆ ವಸತಿ ಮುಂತಾದ ಕಲ್ಯಾಣ ಕಾರ್ಯಕ್ರಮಗಳನ್ನು ಪ್ರಾರಂಭಿಸಬೇಕು.

### ಮಹಿಳೆ

ಸರ್ಕಾರವು ಎಲ್ಲ ನಿರುದ್ಯೋಗಿ ಮತ್ತು ನಿರ್ಗತಿಕ ಮಹಿಳೆಯರಿಗೆ ಜೀವನಾಧಾರದ ಖಾತರಿ ಕೊಡಬೇಕು. ಮಹಿಳೆಯರಿಗೆ ಉದ್ಯೋಗ ದೊರಕಿಸುವ ಜವಾಬ್ದಾರಿ ಸರ್ಕಾರದ್ದಾಗಬೇಕು. ಹಳ್ಳಿಗಾಡುಗಳಲ್ಲಿ ಮತ್ತು ಕೊಳೆಗೇರಿಗಳಲ್ಲಿ 'ಸುಲಭ್' ಮಾದರಿಯ ಸರಳ ಪಾಯಿಖಾನೆಗಳನ್ನು ನಿರ್ಮಾಣ ಮಾಡಬೇಕು. ಸರ್ಕಾರವು ಒದಗಿಸುವ ವಸತಿಗಳಿಗೆ ಪಾಯಿಖಾನೆಗಳ ಸೌಲಭ್ಯವಿರಬೇಕು.

ವರದಕ್ಷಿಣೆಯ ಸಂಬಂಧದ ಎಲ್ಲ ಅಪರಾಧಗಳನ್ನು ಆರುತಿಂಗಳ ಒಳಗಾಗಿ ಶಿಕ್ಷೆಯ ಕಕ್ಷೆಗೆ ತರಬೇಕು. ಅಂತಹ ಅಪರಾಧಗಳಿಗೆ ಕಾನೂನಿನಲ್ಲಿ ಅವಕಾಶವಿರುವ ಗರಿಷ್ಟ ಶಿಕ್ಷೆಯನ್ನೂ ವಿಧಿಸಬೇಕು.

ಸಂಪಾದಕ/ಪ್ರಕಾಶಕ/ಮುದ್ರಕ : ರಂಗಸ್ವಾಮಿ ಬೆಲ್ಲದ ಮಡು, 2ಬಿ, ಮಹದೇಶ್ವರ ನಿಲಯ, 2ನೇ ಕ್ರಾಸ್, 2ನೇ ಮೈನ್, ಎ.ಕೆ. ಕಾಲನಿ, ಹೊಸಳ್ಳಿ, ಬೆಂಗಳೂರು-40
ಮುದ್ರಣ : ಇಳಾ ಪ್ರಿಂಟರ್ಸ್, 4ನೇ ಮುಖ್ಯ ರಸ್ತೆ, 8ನೇ ತಿರುವು, ಚಾಮರಾಜಪೇಟೆ, ಬೆಂಗಳೂರು-18

# ಜನತಾಪಕ್ಷದ ರಕ್ತದಾಹಕ್ಕೆ ಇನ್ನೊಂದು ಬಲಿ

## ಮಂಡಲ್ ಪ್ರಧಾನನ ವಜಾಗೆ ದ.ಸಂ.ಸ. ಒತ್ತಾಯ

## ಪ್ರತಿಭಟನಾ ಜಾಥಾದಲ್ಲಿ ಗೂಂಡಾಗಳ ಹಲ್ಲೆ; ನಿಷೇದಾಜ್ಞೆ

ಜನತಾ ಪಕ್ಷದ ಮಂಡಲ್ ಮಾರಿಗೆ ಇತ್ತೀಚಿನ ಬಲಿ ಗೊಪ್ಪೇನಹಳ್ಳಿಯ ಶೇಖರಪ್ಪ. ಗೊಪ್ಪೇನ ಹಳ್ಳಿ ಶಿವಮೊಗ್ಗ ಜಿಲ್ಲೆಯ ಚನ್ನಗಿರಿ ತಾಲೂಕಿನ ಒಂದು ಗ್ರಾಮ. ಇತ್ತೀಚಿನ ಮಂಡಲ್ ಪಂಚಾಯ್ತಿಯ ಕೇಂದ್ರ. ಪಾಳೆಯಗಾರಿ ಶಾಸಕ, ಸಮಾಜವಾದಿ ಮುಖವಾಡದ ಜೆ. ಎಚ್. ಪಟೇಲರ ಚನ್ನಗಿರಿಯಿಂದ ಕೇವಲ 8. ಕಿ. ಮೀ. ದೂರದಲ್ಲಿರುವ ಊರು.

ಇಲ್ಲಿ ಲಿಂಗಾಯಿತ ಜಾತಿಯೇ ಪ್ರಧಾನ. ಉಳಿದ ದುರ್ಬಲ ಜಾತಿಗಳದು ಕೇವಲ 13 ಕುಟುಂಬಗಳು ಮಾತ್ರ. ಪ್ರಬಲ ಲಿಂಗಾಯಿತ ಪಾಳ್ಯಕ್ಕೊಬ್ಬ ಪುಂಡು ಸರದಾರ ಕೆ. ದೇವೇಂದ್ರಪ್ಪ. ಮಂಡಲ ಪ್ರಧಾನನೆಂಬ ಪಟ್ಟ ಜೇರೆ ಸಿಕ್ಕ ಮೇಲೆ ಈತನ ದೌರ್ಜನ್ಯ, ದಬ್ಬಾಳಿಕೆ ದುರಾಚಾರಗಳು ಒಮ್ಮೆಂದೊಮ್ಮೆಲೇ ದುಪ್ಪಟ್ಟಾಗಿವೆ, ಮಂಡಲ ಕಛೇರಿಯನ್ನೇ ತನ್ನ ದಬ್ಬಾಳಿಕೆಯ ಲಾಕಪ್ಪಾಗಿ ಪರಿವರ್ತಿಸಿ ಕೊಂಡಿದ್ದಾನೆ.

ಈ ದೇವೇಂದ್ರಪ್ಪನ ದಬ್ಬಾಳಿಕೆಗೆ ಎದುರು ನಿಂತ 26 ವರ್ಷದ ನಾಯಕ ಜನಾಂಗದ ಯುವಕ ಶೇಖರಪ್ಪ. ಶೇಖರಪ್ಪನ ಅಸ್ತಿತ್ವವೇ ದೇವೇಂದ್ರಪ್ಪನ ಅಧಿಕಾರ ಬಲಕ್ಕೆ ಒಡ್ಡಿದ ಸವಾಲಾಗಿತ್ತು.

ಊರಿನ ಯಾರದೋ ಪಂಪ್‌ಸೆಟ್ ಸ್ಟಾರ್ಟರ್ ಕಳುವಾದ ನೆಪದಲ್ಲಿ ಶೇಖರಪ್ಪನನ್ನು ದೇವೇಂದ್ರಪ್ಪ ಮತ್ತವನ ಹಿಂಬಾಲಕರು ಹಿಡಿದು ಹಿಂಸಿಸಿ ಕೈಕಾಲುಗಳನ್ನು ಕಟ್ಟಿ ಊರ ಮಧ್ಯದ ಮಂಡಲ ಕಛೇರಿಗೆ ತಂದು ಬೀಗ ಹಾಕಿ ಕೂಡಿ ಹಾಕಿದರು. ನಾಕು ಹೆಜ್ಜೆಯಲ್ಲೇ ಇದ್ದ ಶೇಖರಪ್ಪನ ತಂದೆತಾಯಿ, ಮನೆಯವರಿಗೆ ಕೂಡ ಸುದ್ದಿ ಮುಟ್ಟಿಸಲಿಲ್ಲ.

8–11–87ರಂದು ಶೇಖರಪ್ಪನ ಹೆಣ ಮಂಡಲ ಕಛೇರಿಯೊಳಗೆ ನೇಣು ಹಾಕಿಕೊಂಡಂತೆ ನೇತಾಡುತ್ತಿತ್ತು. ನೇತಾಡುವ ಹೆಣವನ್ನು ಊರವರು ಕಣ್ಣಾರೆ ಕಂಡರು. ಶೇಖರಪ್ಪನೇ ನೇಣುಹಾಕಿಕೊಂಡನೋ ಅಥವಾ ಹಿಂಸಿಸಿ ಕೊಲೆ ಮಾಡಿ ನೇಣು ಹಾಕಿದ್ದಾರೋ ಎಂಬುದು ಶವ ಪರೀಕ್ಷೆ ವರದಿ ಬಂದ ನಂತರವೇ ತಿಳಿಯಬಹುದು

(ಕೊನೆ ಪುಟಕ್ಕೆ)

---

ನಾಗುವುದನ್ನು ಸಹಿಸಲಿಲ್ಲ. ಇಬ್ಬರೂ ಒಂದೇ ಪಕ್ಷದವರು. ಹಾಗಾಗಿ ಸಹಜವಾಗಿಯೇ ಜಿಲ್ಲೆಯ ಒಳರಾಜಕೀಯಕ್ಕೆ ತಕ್ಕಂತೆ ವಿಶ್ವನಾಥರೆಡ್ಡಿ ಮುದ್ನಾಳರ ಬಣಕ್ಕೆ ಬಸವರಾಜಪ್ಪ ಸೇರಿದರೆ ಬಾಪುಗೌಡ ದರ್ಶನಾಪೂರ ಬಣಕ್ಕೆ ಲಕ್ಷ್ಮಣ ನಾಯಕ ಸೇರಿದರು.

ವಡಗೇರಾ ಮೀಸಲು ಕ್ಷೇತ್ರ ಎಂದು ಘೋಷಣೆಯಾದಾಗಲೇ ಬಸವ ರಾಜಪ್ಪ ಸಾವ್ಕಾರನ ಮೀಸೆಗೆ ಮಣ್ಣು ಬಳಿದಿತ್ತು. ಲಕ್ಷ್ಮಣ ನಾಯಕ ಜನತಾ ಪಕ್ಷದ ಅಭ್ಯರ್ಥಿಯಾಗಿ ಆರಿಸಿ ಹೋದರು. ಕಡೆಗೆ ಬಸವರಾಜಪ್ಪ ವಡಗೇರಾ ಮಂಡಲ ಪಂಚಾಯ್ತಿ ಸದಸ್ಯರಾಗುವಷ್ಟಕ್ಕೆ ಸಮಾಧಾನ ಹೊಂದಬೇಕಾಯಿತು.

ಈಗ ಬಸವರಾಜಪ್ಪ ಸಾವ್ಕಾರನ ತಲೆಯಲ್ಲಿ ಹೊಸ ಹುಳು ಹೊಕ್ಕಿತು. ಮಂಡಲ ಪಂಚಾಯ್ತಿ ಪ್ರಧಾನ ತಾನಾಗಬೇಕೆಂದು ಅವರು ಹಟ ಹಿಡಿದರು. ಆದರೆ ಲಕ್ಷ್ಮಣ ನಾಯಕ್‌ಗೆ ತನ್ನ ಕ್ಷೇತ್ರದ ಮಂಡಲ ಪಂಚಾಯ್ತಿ ಪ್ರಧಾನ ಹಿಂದುಳಿದ ವರ್ಗದವರಾಗಬೇಕೆಂಬ ಆಲೋಚನೆಯಿತ್ತು. ಹಾಗಾಗಿ ಆತ ಸಕ್ರಿಯನಾದ; ಯಶಸ್ವಿಯೂ ಆದ. ಶಹಾಪುರ ತಾಲೂಕಿನ ತುಮಕೂರು ಗ್ರಾಮದ ಸಾಳೇರ ಜನಾಂಗದ ಪ್ರಭು ವಡಗೇರಾ ಮಂಡಲ ಪಂಚಾಯ್ತಿ ಪ್ರಧಾನರಾದರು, ಕೊಂಕಲ್ ಕ್ಷೇತ್ರದಿಂದ ಆರಿಸಿ ಬಂದ ಯಂಕಪ್ಪ ಉಪಪ್ರಧಾನರಾದರು.

ಬಸವರಾಜಪ್ಪ ಸಾವ್ಕಾರ ಮತ್ತು ಅವರ ಗುಂಪು ಬಾಲ ಸುಟ್ಟ ಕೋತಿಯಂತಾಗಿದ್ದರು. ಅವರ ದರ್ಪ, ಹಟ ಈಗ ಮೇಲುಗೈಯಾಗಿ ವಿವೇಕ ಕಳೆದುಕೊಂಡರು.

ನವೆಂಬರ್ ತಿಂಗಳ 13ನೇ ದಿನಾಂಕ ಮಧ್ಯಾಹ್ನದ ಸಮಯ ವಡಗೇರಾ ಪೋಲೀಸ್ ಠಾಣೆಯ ಮುಂದೆ ಲಕ್ಷ್ಮಣ ನಾಯಕನನ್ನು ಮಚ್ಚು, ಕತ್ತಿಗಳಿಂದ ಕೊಲೆ ಮಾಡಲಾಯ್ತು.

ಹೆಂಡತಿ ಮತ್ತು ನಾಲ್ಕು ಜನ ಮಕ್ಕಳನ್ನು ಬಿಟ್ಟು ಲಕ್ಷ್ಮಣ ನಾಯಕ ಅಗಲಿ ಹೋದರು. ಸ್ವಾಭಿಮಾನಿ ಚಳಿವಳಿಯ ನಾಯಕ ಇನ್ನಿಲ್ಲವಾದ.

ಲಕ್ಷ್ಮಣ ನಾಯಕನ ಕೊಲೆ ಪ್ರಕರಣದಲ್ಲಿ ಈವರೆಗೆ ಮೂವರನ್ನು ಬಂಧಿಸಲಾಗಿದೆ; ಆಪಾದಿತರಿಬ್ಬರು ಪರಾರಿಯಾಗಿದ್ದಾರೆ; ಅವರನ್ನು ಪತ್ತೆ ಹಚ್ಚುವಲ್ಲಿ ಪೊಲೀಸರು ವಿಫಲರಾಗಿದ್ದಾರೆ.

ಬಸವರಾಜಪ್ಪ ಸಾವ್ಕಾರ–ಲಕ್ಷ್ಮಣನಾಯಕರ ವೈರ ಹೆಚ್ಚುಕಮ್ಮಿ ವಿಶ್ವನಾಥರೆಡ್ಡಿ ಮುದ್ನಾಳ–ಬಾಪೂಗೌಡ ದರ್ಶನಾಪೂರ ಅವರ ನಡುವಣ ವೈರ ಎಂದೇ ಹೇಳಬೇಕು. ಆದರೆ ಈವರೆಗೆ ವಡಗೇರಾಗೆ ಈ ಇಬ್ಬರೂ ಜನತಾಮುಖಂಡರು ಭೇಟಿ ನೀಡಿಲ್ಲ. ಜಿಲ್ಲೆಯನ್ನು ಪ್ರತಿನಿಧಿಸುವ ಕಾರ್ಮಿಕ ಸಚಿವ ಎಸ್ ಕೆ. ಕಾಂತಾ ಭೇಟಿ ಕೊಟ್ಟರೂ ಅಲ್ಲಿನ ಜನರ ವಿಶ್ವಾಸ ಗಳಿಸಿದಂತಿಲ್ಲ. ತನ್ನ ಪಕ್ಷದ ಜಿಲ್ಲಾ ಪರಿಷತ್ ಸದಸ್ಯ ಹಾಗೂ ದಲಿತ ವರ್ಗದ ನಾಯಕನೊಬ್ಬ ಬಲಿಯಾದ ನಂತರವೂ ಜನತಾ ಪಕ್ಷದ ನಾಯಕತ್ವ ಕಣ್ತೆರೆದಿಲ್ಲ. ಜಿಲ್ಲೆಯ ಒಳ ರಾಜಕೀಯದ ಎರಡು ಹುಲಿಗಳನ್ನು ಪಳಗಿಸುವಲ್ಲಿ ಕೇಂದ್ರ ನಾಯಕತ್ವ ವಿಫಲವಾಗಿ ಹೋಗಿದೆ.

ಲಕ್ಷ್ಮಣನಾಯಕನ ಕೊಲೆ ಪ್ರತಿಭಟಿಸಿ, ಶಹಾಪೂರ, ಗುಲ್ಬರ್ಗಾಗಳಲ್ಲಿ ಪ್ರದರ್ಶನ ನಡೆಸಿರುವ ಲಂಬಾಣಿ (ಬಂಜಾರ) ಸಂಘವು ನವೆಂಬರ್ 25 ರಂದು ವಿಧಾನ ಸೌಧದ ಮುಂದೆ ಸತ್ಯಾಗ್ರಹವನ್ನು ನಡೆಸಿದೆ. ಗೃಹಸಚಿವ ಜಾಲಪ್ಪನವರಿಗೆ ಸಲ್ಲಿಸಿದ ಮನವಿಯಲ್ಲಿ ಅ) ಕೊಲೆ ಬಗ್ಗೆ ನ್ಯಾಯಾಂಗ ತನಿಖೆ ನಡೆಸಿ ಆ) ಕೊಲೆಗೈದ, ಕೊಲೆಗೆ ಪ್ರೇರೇಪಿಸಿದವರನ್ನು ಗುರುತಿಸಿ ಬಂಧಿಸಿ ಇ) ಕೊಲೆಯಲ್ಲಿ ಶಾಮಿಲಾಗಿರುವ ರಾಜಕೀಯ ವ್ಯಕ್ತಿಗಳನ್ನು ಆಯಾ ಪಕ್ಷದಿಂದ ಉಚ್ಚಾಟಿಸಿ ಈ) ಈ ಕೊಲೆಯಲ್ಲಿ ಶಾಮೀಲಾಗಿರುವ ಪೋಲೀಸರನ್ನು ಬಂಧಿಸಿ ಎಂದು ಸಂಘವು ಒತ್ತಾಯಿಸಿದೆ.